# ತಳಿರು



ಕರ್ಣಾಟಕಸಂಘ

ಮಹಾರಾಜರವರ ಕಾಲೇಜು, ಮೈಸೂರು

೧೯೩೦

# ಮುನ್ನುಡಿ

ಈಗ ಕೆಲವು ದಿನಗಳ ಹಿಂದೆ, ನಮ್ಮ ಸಂಘದ ಕಾರ್ಯದರ್ಶಿಗಳಾದ ಶ್ರೀಮಾನ್ ಬಿ. ಪುಟ್ಟನಂಜಪ್ಪನವರು ಸಂಘದ ಸದಸ್ಯರಿಂದ ರಚಿತವಾದ ಹೊಸ ಕವನಗಳನ್ನು ಓದಿಸುವುದಕ್ಕಾಗಿ ಸಂಘದ ಅಧ್ಯಕ್ಷರಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ, ಎಂ.ಎ., ಬಿ.ಎಲ್., ಅವರ ಅಧ್ಯಕ್ಷತೆಯಲ್ಲಿ ಸಭೆಸೇರಿಸಿದ್ದರು. ಆ ದಿನ ಓದಿದ ಕವನಗಳಲ್ಲಿ ಕೆಲವು ಅಲ್ಲಿ ನೆರೆದಿದ್ದವರ ಮೆಚ್ಚಿಕೆಯನ್ನು ಪಡೆದದ್ದರಿಂದ ಈ ಕವನಗಳನ್ನು ಸೇರಿಸಿ ಪ್ರಕಟಿಸಬೇಕೆಂಬ ಪ್ರೇರಣೆಯುಂಟಾಯಿತು. ಹಾಗೆ ಸೇರಿಸುವಾಗ ಹೊಸದಾಗಿ ಬರೆದವರ ಕವನಗಳ ಜೊತೆಗೆ ಹಿಂದೆ ಸಂಘದ ಸದಸ್ಯರಾಗಿದ್ದವರ ಕೆಲವು ಕವನಗಳನ್ನೂ ತೆಗೆದುಕೊಳ್ಳಬೇಕೆಂದು ಸಲಹೆ ಬಂದಿತು. ಅದರಂತೆ, ಈ ಗ್ರಂಥದಲ್ಲಿ ಸಂಘದ ಹಿಂದಿನ ಮತ್ತು ಈಗಿನ ಸದಸ್ಯರ ಕವನಗಳನ್ನು ಸೇರಿಸಿದೆ. ಈಗ್ಗೆ ಎರಡು ವರ್ಷಗಳ ಹಿಂದೆ ನಮ್ಮ ಸಂಘವು ಪ್ರಕಟಿಸಿದ 'ಕಿರಿಯ ಕಾಣಿಕೆ'ಗೆ ದೊರೆತ ಆದರದಿಂದ ಪ್ರೋತ್ಸಾಹಿತರಾಗಿ ಈಗ 'ತಳಿರು' ಎಂಬ ಈ ಕವನಗಳ ಪುಸ್ತಕವನ್ನು ಕನ್ನಡಿಗರಿಗೆ ಅರ್ಪಿಸಿರುತ್ತೇವೆ. ಈ ಗ್ರಂಥವೂ ಅವರ ಅದೇ ರೀತಿಯ ಆದರಕ್ಕೆ ಪಾತ್ರವಾಗುವುದೆಂದು ನಂಬಿರುತ್ತೇವೆ.

ನಮ್ಮ ಸಂಘದ ಸದಸ್ಯರಿಗೆ ಕಾವ್ಯರಚನೆಯಲ್ಲಿ ಉತ್ಸಾಹವೂ ಉದ್ಯಮವೂ ಹೆಚ್ಚುತ್ತಿವೆ. ಈ ತರುಣಕವಿಗಳಲ್ಲಿ ಕೆಲವರು ಕನ್ನಡಿಗರಿಗೆ ಪರಿಚಿತರಾದವರು. ಅಷ್ಟೇ ಅಲ್ಲ, ಹೆಸರುವಾಸಿಯಾದವರು ; ಮತ್ತೆ ಕೆಲವರು ಹೊಸಬರು, ಈಗೀಗ ಪದ್ಯರಚನೆಗೆ ಆರಂಭಿಸಿರುವವರು. ಆದಕಾರಣ, ಇಲ್ಲಿ ಬಂದಿರುವ ಕವನಗಳೆಲ್ಲವೂ ಒಂದೇ ಮಟ್ಟಕ್ಕೆ ಬಾರ

ದಿರುವುದು ಸಹಜವಾಗದು. ಮುಖ್ಯವಾಗಿ, ಕವನಮಾಡುವುದರಲ್ಲಿ ಆಸಕ್ತಿ ಯುಳ್ಳವರಿಗೆ ಉತ್ತೇಜನಕೊಡಬೇಕೆಂಬ ಉದ್ದೇಶದಿಂದ ಈ ಪುಸ್ತಕ ವನ್ನು ಪ್ರಕಟಿಸಿದ್ದೇವೆ.

ಈ ಗ್ರಂಥಕ್ಕೆ ಸೇರಿರುವ 'ಮೃತ್ಯುವಿಗೆ ಎಲ್ಲರೂ ಒಂದೇ' ಎಂಬುದು ಷರ್ಲಿ ಕವಿಯ 'Death the Leveller' ಎಂಬ ಕವನದ ಅನುವಾದವಾಗಿದೆ. ಮಿಕ್ಕುವೆಲ್ಲವೂ ಸ್ವತಂತ್ರವಾದುವು.

ಈ ಪುಸ್ತಕದೊಳಗಿನ ಕವನಗಳಲ್ಲಿ, 'ಹೇಮಾವತಿ-ಹೇಮಗಿರಿ' ಎಂಬುದು "ಪ್ರಬುದ್ಧಕರ್ಣಾಟಕ"ದಲ್ಲಿಯೂ, 'ಜೀವನದ ತಿರುಳು', 'ದೀನಗಿಂತ ದೇವ ಬಡವ', 'ನಂಜುಂಡ', 'ನನ್ನ ವಾಣಿಗೆ' ಎಂಬುವು "ಜಯಕರ್ನಾಟಕ" ದಲ್ಲಿಯೂ, 'ತಾರೆಗಳು' ಎಂಬುದು "ಪ್ರೇಮ" ದಲ್ಲಿಯೂ, 'ನೆರೆ' ಎಂಬುದು "ಅರ್ಥಸಾಧಕಪತ್ರಿಕೆ" ಯಲ್ಲಿಯೂ, 'ಬಿಳಿಮುಗಿಲು', 'ಬೀದಿಯೊಳಗಲೆಯುತಿಹಳಾರಿವಳು', 'ಹೋಗಾಯಿತು' ಎಂಬುವು ಮೈಸೂರು ವಿಶ್ವವಿದ್ಯಾನಿಲಯದ "ಯೂನಿಯನ್" ಪತ್ರಿಕೆಯಲ್ಲಿಯೂ, 'ಮುಂಗಾರು' ಎಂಬುದು "ಕಾನಡ ಧುರೀಣ" "ಪ್ರಬುದ್ಧಕರ್ಣಾಟಕ" ಗಳಲ್ಲಿಯೂ ಮೊದಲೇ ಪ್ರಕಟವಾಗಿದ್ದುವು. ಈ ಪತ್ರಿಕೆಗಳ ಸಂಪಾದಕರುಗಳಿಗೆ ನಮ್ಮ ವಂದನೆಗಳನ್ನು ಅರ್ಪಿಸುತ್ತೇವೆ.

ಈ ಗ್ರಂಥವನ್ನು ಅಂದವಾಗಿ ಅತ್ಯಲ್ಪಕಾಲದಲ್ಲಿ ಅಚ್ಚುಮಾಡಿ ಕೊಟ್ಟದ್ದಕ್ಕಾಗಿ ಮೈಸೂರು ಜಿ. ಟಿ. ಎ. ಮುದ್ರಣಾಲಯದ ಶ್ರೀಮಾನ್ ಕೆ. ರಾಮನರಸಿಂಹಯ್ಯನವರಿಗೆ ತುಂಬ ಕೃತಜ್ಞರಾಗಿದ್ದೇವೆ.

ಮಹಾರಾಜರವರ ಕಾಲೇಜು,
ಮೈಸೂರು,
ಶುಕ್ಲ ಸಂ॥ ಫಾಲ್ಗುಣ ಶು॥ ೨.

ಟಿ. ಎಸ್. ವೆಂಕಣ್ಣಯ್ಯ,
ಉಪಾಧ್ಯಕ್ಷ,
ಕರ್ಣಾಟಕ ಸಂಘ.

# ವಿಷಯಸೂಚಿಕೆ

| ಕವನ | | ಪುಟ |
|---|---|---|

# ತಳಿರು

---

## ಬೈಗು

ನೋಡದೋ ನೋಡಲ್ಲಿ,
ಭೂಮಿಆಕಾಶಗಳು
   ಕೂಡುವೆಡೆಯಲ್ಲಿ,
ಬೈಗಿನಾ ಚಿಲುಮೆಯುದು
   ಚಿಮ್ಮುತಿಹುದಲ್ಲಿ.

ಎಳಗೆಂಪು ಹೊಳೆಯೊಂದು
   ಉಕ್ಕುತಿಹುದಲ್ಲಿ,
ಉಕ್ಕಿ ಮೇಲಕೆ ಹರಿದು
   ಹರಡುತಿಹುದಲ್ಲಿ.

ಗಗನದೊಳು ಬಳಸಿಹುದು
   ನಸುಗೆಂಪು ಬೆಳಸು,
ಎಲ್ಲೆಲ್ಲಿಗೆ ಚೆಲ್ಲಿ
   ಚೆದರುತಿಹುದಲ್ಲಿ.

ಚೆಲುವೆಯದು ಕಡುಗೆಂಪು,
ಸುತ್ತ ಎಳಗೆಂಪು,
ಎಲ್ಲೆಎಲ್ಲೆಯೊಳೆಲ್ಲ
ನಸುಗೆಂಪು—ಅಲ್ಲಿ.

ನೋಡದೋ ನೋಡಲ್ಲಿ,
ಭೂಮಿಆಕಾಶಗಳು
ಕೂಡುವೆಡೆಯಲ್ಲಿ,
ಚೆಲುವಿನಾ ಚೆಲುವೆಯದು
ಚಿಮ್ಮುತಿಹುದಲ್ಲಿ.

ಬಿ. ಕೃಷ್ಣಮೂರ್ತಿ.

# ತಾರೆಗಳು

ಗಗನದ ಚುಕ್ಕಿಗಳು,—ಅಮ್ಮಾ, ಅವು
ಇರುಳಡವಿಯ ಪೂವ್ವಕ್ಕಿಗಳೆ ?
ಮಿಣುಮಿಣುಕುತಲಿಹುದೇನವು ? ಅವುಗಳು
ಬಡಿಯುವ ರನ್ನದ ರೆಕ್ಕೆಗಳೆ ?
ಪಳುಕಿನ ಕಣ್ಣುಗಳೆ ?
ಮುತ್ತಿನ ಮೊಟ್ಟೆಗಳೆ ?

ಮೂರ್ತಿ, ಅವುಗಳ ಕತೆಯನು ಕೇಳು :
ತಾರೆಗಳಾಯುವು ಮಕ್ಕಳ ಬಾಳು !
ಎಳಮಕ್ಕಳ ಸತ್ಕಾರ್ಯಗಳು,
ಮುಗುಳ್ನಗೆಗಳು, ಔದಾರ್ಯಗಳು,
ಬುವಿಯಿಂದೊಡನೆಯೆ ಚಿಮ್ಮುತ, ಹಾರುತ,
ನೆಟ್ಟನೆ ಸಗ್ಗಕೆ ಹೋಗುವುವು ;
ದೇವರ ಪಾದವ ಮುಟ್ಟಿದ ಕೂಡಲೆ
ಬಾನೊಳು ತಾರೆಗಳಾಗುವುವು !

ನೀನೊಂದೆಳನಗೆ ಬೀರಿದರಿಲ್ಲಿ
ಅದು ತಾರೆಯವೊಲು ಹೊಳೆವುದು ಅಲ್ಲಿ !
ನೀನೊಂದೊಳ್ನುಡಿ ನುಡಿದರೆ ಇಲ್ಲಿ
ಹುಟ್ಟುವುದೊಂದುಡು ಬಾಂದಳದಲ್ಲಿ !
ಗೆಳೆಯರೊಡನೆ ನೀ ನಲಿವಾಗಿಲ್ಲಿ
ಮೂಡುತಲಿರುವುವು ತಾರೆಗಳಲ್ಲಿ !

ನೀನೊಂದಳುವನು ಅತ್ತರೆ ಇಲ್ಲಿ
ಮಡಿಯುವುದೊಂದುಡು ಕೂಡಲೆ ಅಲ್ಲಿ!
ಹೆತ್ತಿರುವಮ್ಮನ ಬೈದರೆ ಇಲ್ಲಿ
ಸಾಯುವುವು ತಾರಕೆಗಳು ಮೇಲಲ್ಲಿ!
ಗೆಳೆಯರೊಡನೆ ನೀ ಕಲಹವನಾಡೆ
ಪಟಪಟ ಸಿಡಿವುವು ಉಡುಗಳು ಕೂಡೆ!

ಅವುಗಳ ಪುಟ್ಟಿಪ ಬೊಮ್ಮನು ನೀನೆ!
ಅವುಗಳ ರಕ್ಷಿಪ ವಿಷ್ಣುವು ನೀನೆ!
ಅವುಗಳ ಕೊಲ್ಲುವ ರುದ್ರನು ನೀನೆ!
ಅವುಗಳ ಅಳಿವುಳಿವೆಲ್ಲವು ನೀನೆ!

ಗಗನದ ಚುಕ್ಕಿಗಳು,—ಕಂದಾ, ಅವು
ಭೂಮಿಯ ಮಕ್ಕಳ ಕೀರ್ತಿಗಳು!
ಮಕ್ಕಳು ನಲಿದರೆ ಮಿಣುಕುವುವವುಗಳು!
ಮಕ್ಕಳ ಬಾಳ್ವೆಯ ಮೂರ್ತಿಗಳು!

ಕೆ. ವಿ. ಪುಟ್ಟಪ್ಪ.

# ಚಿಟ್ಟೆ

ತೋಟದಲಿದ್ದುವು ಬಗೆಬಗೆ ಹೂಗಳು
ತೋಟದ ಚೆಲುವಿನ ಕಣಿಯಾಗಿ ;
ಆಟದ ಬೀಡನು ಒದವಿಸಿ ಚಿಟ್ಟೆಗೆ
ನೋಟಕೆ ಮೆರೆಯುತ ಚೆಲುವಾಗಿ.
ಹೂಗೊಯ್ಯಲು ನಾ ತೊಡಗಿರಲು
ಆಗೈದಿದುವು ಚಿಟ್ಟೆಗಳು.
ಅಲ್ಲಿಹ ಸುಮಗಳ ಮೇಲಡರುತ್ತ
ಉಲ್ಲಸದಿಂದಲಿ ಹಾರಾಡುತ್ತ
ಹಾರುತ ಹಾರುತ ತೋಟದಲೆಲ್ಲ
ಹೀರುತ ಮಧುವನು ಹೂಗಳಲೆಲ್ಲ
ಮೆರೆದುವು, ನಲಿದುವು,
ತೊರೆಯುತ ಸುಮಗಳ
ಚಿಮ್ಮುತ ಹಾರಿದುವಲ್ಲಲ್ಲಿ,
ಹೊಮ್ಮುವ ಹೊಂಬಿಸಿಲೆಡೆಯಲ್ಲಿ.

ಹೂಗೊಯ್ಯುವುದನು ನಾ ಬಿಟ್ಟೆ—
ಬಿಡಿಸಿತು ಅದು ಒಂದೇ ಚಿಟ್ಟೆ !—
ಕಪ್ಪಲಿ ಬೆರೆಯುತ
ಒಪ್ಪಿದ ನೀಲಿ ;
ಇರುಳಲಿ ಹೊಳೆಯುವ ತಾರೆಗಳಂದದಿ
ಬಿಳುಪಿನ ಚುಕ್ಕಿಗಳು ;
ತಾರಾನಿಕರದ ಮಧ್ಯದಿ ಮೆರೆಯುವ
ಚಂದ್ರನ ಚೆಂದದಲಿ

ತೊಳಗುವ ಹಳದಿಯು ಸೊನ್ನೆಗಳು,
ಹೊನ್ನಿನ ಸೊನ್ನೆಗಳು.—
ಹಾರುತ ಹಾರುತ ಬಂದಿತು ಮುಂದೆ
ಸೆಳೆಯುತಲೆನ್ನಯ ಮನವನ್ನೊಂದೆ.
ಕೆಂಪಿನ ಕುಸುಮವ ಕಂಡದು ಎರಗೆ
ಕುಸುಮವು ಬಾಗಿತು ಭಾರದಿ ತಿರೆಗೆ.
ಒಡನೆಯೆ ಹಾರಿತು ನಿಲ್ಲದೆಯೆ,
ಕುಸುಮದ ಕಷ್ಟವ ಕೊಳ್ಳದೆಯೆ.
ಎನ್ನಯ ನೋಟವು ಅದ ಬಿಗಿದಿರಲು
ಕುಣಿಕುಣಿದಾಡಿತು ಎಲ್ಲೆಲ್ಲು.

—ಏನೆಲೆ ಚಿತ್ರದ ಚಿಟ್ಟೆಯೆ, ನೀನು
ಹಾರುತ ಹಾರುತ ಕುಣಿಕುಣಿದು,
ಕುಣಿಸುವೆ ಎನ್ನಯ ಹೃದಯವನು!
ಹೂವಿನ ಹಸರವೆ ನಿನ್ನಯ ಲೋಕವೆ ?
ಅವುಗಳ ನೇಹವೆ ನಿನಗದು ನಾಕವೆ ?
ಕುಸುಮದ ಜೊತೆಯಲಿ ನಿನ್ನನ್ನು
ಸೃಜಿಸಿದನೇನೋ ವಿಧಿ ತಾನು.
ಹೂವಿಗೆ ಎರಗುತ ರಸವನು ಹೀರಿ,
ಅಲುಗದೆ, ಚಿತ್ರಿಸಿದಂತಿರೆ ತೋರಿ,
ಸುಮಗಳ ಜೊತೆಯಲಿ ಸುಮವಾಗಿ
ಮೆರೆಯುವೆ ಚೆಲುವಿನ ಬೀಡಾಗಿ.
ಕಾಣುವೆ ಹಾರುವ ಸುಮದಂತೆ
ಹಾರಲು ತೊಡಗಲು ಮೊದಲಂತೆ.

ನಿನ್ನಯ ಬಾಳ್ಗೋ ಬಲು ಕಿರಿದು,
ನಿನ್ನಯ ಸೊಗವಾದರೆ ಹಿರಿದು !
ಹೂವಿನ ಬಾಳನು ಹೊಂದಿರುವೆ,
ನೀನದರಲಿ ಬಲು ತಣಿದಿರುವೆ.
ಎನ್ನೀ ಬಾಳನು ತೆಗೆದುಕೊ ; ನಿನ್ನ
ಕಿರಿಬಾಳನು ಕೊಡು, ಎನಗದು ಚಿನ್ನ !
ಎನ್ನಯ ಮಾತನು ಕೇಳುವೆಯ ?
ಹೊನ್ನಿನ ಬಾಳನು ನೀಗುವೆಯ ?
ಏನೆಲೆ ಚಿಟ್ಟೆ,
ಎನ್ನನು ಬಿಟ್ಟೆ !—
ನಲಿಯುತ ನಲಿಯುತ ತೋಟದಲಿ
ಸುಮವಾದೆಯ ನೀ ಮಾಯದಲಿ ?

ಎಂ. ವಿ. ಸೀತಾರಾಮಯ್ಯ.

# ಬಿಳಿಮುಗಿಲು

ನಿಮಿಷಕೆ ನಿಮಿಷಕೆ ಮಾರ್ಪಡುತ
ಮನಬಂದೆಡೆಗಾಗಡಿಯಿಡುತ
ಬಿಳಿಮುಗಿಲೀಗಡೆ ಸಾರುವುದು
ಸ್ವತಂತ್ರವೆಂಬುದರರ್ಥವನು.

ಬಿಳಿಮುಗಿಲಲ್ಲಿದು ಮುಗಿಲಲ್ಲ ;
ಬಾನಿನ ದೇವಿಯರಿವರೆಲ್ಲ
ನೊರೆಬಿಳುಪಿನ ವಸನವನುಟ್ಟು
ಪರಿವರು ಪವನನಿಗೆದೆಗೆಟ್ಟು.

ಹರನಾ ಜಟೆಯಲಿ ಸೆರೆಸಿಲುಕಿ
ದೇವನು ಕರುಣಿಸೆ ಸೊಕ್ಕಡಗಿ
ಜಾಹ್ನವಿ ತಾನಿಳೆಗಿಳಿದುದನು
ಪೊಸತೆನೆ ನಟಿಸುತ ನಲಿಯುವಳು.

ನಾಕವ ನಾವಿಹ ಜಗದಿಂದ
ಬೇರ್ಪಡಿಸುತಲೀ ನೆವದಿಂದ
ನಿಂದಿಹ ನೀಲದ ಸೀಮೆಯನು
ಕಾಯುವರಿವರೀ ಪಡಿಯರರು.

ಈಶನ ಲೀಲಾರಂಗವಿಹ
ಭೂಮಿಗೆ ಎಲ್ಲೆಯು ಗಗನದಲಿ
ಕಟ್ಟಿದ ತೋರಣ ಸಿಂಗರವು
ಪವನನ ಹತಿಯಲಿ ಚಲಿಸುವುವು.

# ಕಳೆದ ಕಿರಿಯತನ

ಕಿರಿಯತನವು ಕಳೆದುದನ್ನು
ಮರೆತು ನಡೆವುದೆಷ್ಟು ಹುಚ್ಚು !
ಹರೆಯದೊಡನೆ ನಿಲುವುದೆಂತು
ಕಿರಿಯತನದ ಮುಗ್ಧತೆ ?

ಹಗಲು ಹಣ್ಣುತಿರುಗುತಿತ್ತು,
ಹೊಗೆಯು ಬಂಡಿಯೋಡುತಿತ್ತು.
ಮನದಿ, ಹಿಂದೆ ಬಿಟ್ಟುದರದು
ನೆನಪು ಬೇಯುತಿದ್ದಿತು.

ಕಳೆದ ಸುಖವ, ತಬ್ಬುವಳಲ,
ಒಳಗೆ ಕುಳಿತು ನೆನೆಯುತಿಪ್ಪೆ.—
ಹೆಗಲ ಜಗ್ಗುತೊದೆದರಾರೊ ;
ಹಗಲ ಕನಸು ಚೆದರಿತು.

ಹಿಂದೆ ನೋಡೆ—ನಗುವ ಕಣ್ಣ
ಕಂದನೊಂದು. ತುಂಟತನದ
ಬೆಳಕ ಹೊಳೆಸಿ ಕಣ್ಣು ನೆಟ್ಟ
ಚೆಲುವನೆಂತು ಮರೆವೆನು !

" ಬೇಡ ಕಂದ, ಹೊರಗಿನವರ
ಕಾಡಲುಂಟೆ ? ಬೇಡ ಬಿಡೆಲೊ."
ಎಂದು ತಡೆವ ತಾಯ ನುಡಿಯ
ಕಂದನಂದು ಕೇಳದು.

ಅದರ ತುಂಟತನವ ಕಂಡು
ಮುದವನಾಂತೆನೆಂದು ನಾನು.—
ಹುಡುಗನೊದೆಗೆ ಅರ್ಥವುಂಟೆ ?
ನುಡಿಗೆ ಕೊಂಡಿ ಇರುವುದೆ ?

*    *    *

ಎಳೆಯುನಂತೆ ಹೆಗಲ ಜಗ್ಗಿ
ಕೆಳೆಯುನೊಡನೆ ಸೆಣಸಲಿಲ್ಲ ;
ದಿಟ್ಟತನದಿ ನಗುವ ಕಣ್ಣ
ನೆಟ್ಟು ಜರೆಯುಲಿಲ್ಲವು.

ಹರೆಯತನಕೆ ಬೆಳೆದುದನ್ನು
ಮರೆತು ನುಡಿದೆನೊಂದು ನುಡಿಯು.
ಆದರದಕೆ ಕೊಂಡಿಯಿತ್ತು,
ಎದೆಯು ಚುಚ್ಚಿ ಕೊರೆಯಿತು.

' ಯುವಕ 'ನೆನ್ನುವರಿವು, ಅಯ್ಯೊ,
ಅವನ ತೆರದೊಳೆನಗೆ ಇತ್ತೆ ?
ಆದರೀಗ ಅದರ ತಿಳಿವು
ಎದೆಯುನೆಂತು ಇರಿವುದು !

ಕಿರಿಯತನವು ಕಳೆದುದನ್ನು
ಮರೆತು ನಡೆವುದೆಷ್ಟು ಹುಚ್ಚು !
ಆದರೆಷ್ಟು ನೋವು : ಬಾಲ್ಯ
ಹೋದುದೆಂದು ತಿಳಿಯುಲು !

ಪಿ. ಟಿ. ನರಸಿಂಹಾಚಾರ್.

# ಬೀದಿಯೊಳಗಲೆಯುತಿಹಳಾರಿವಳು

ಬೀದಿಯೊಳಗಲೆಯುತಿಹಳಾರಿವಳು ?—ಚೆಲುವೆ,
ಮೈಯ ಮುಚ್ಚಲು ಒಳ್ಳೆ ಬಟ್ಟೆಯಿಲ್ಲ ;
ಉಟ್ಟಿರುವ ಲಂಗವೂ ಹರಿದು ಹೋಗಿಹುದು,
ತೊಟ್ಟಿರುವ ಕುಪ್ಪಸವು ಚಿಂದಿಚಿಂದಿ.

ನಿಡಿಗುರುಳ ಜಡೆಯಾಗಿ ಹೆಣೆದುಕೊಂಡಿಲ್ಲ,
ಧೂಳಡರಿ ಅತ್ತಿತ್ತ ಸರಿಯುತಿಹುದು ;
ತೆಳುಮುಗಿಲು ಕವಿದಿರುವ ಚಂದ್ರಮಂಡಲದಂತೆ
ಇವಳ ಮುಖವೇಕೆ ಬಲು ಕಂದಿರುವುದು ?

ಅಡಗಿರುವ ಅವಳ ಸೌಂದರ್ಯವನು ಭಾವಿಸಲು
ಸಿರಿಯುಳ್ಳ ರಮಣಿಯರ ಜರೆಯುತಿಹುದು ;
ಸಿಂಗರಿಸಿಕೊಳ್ಳುವುದಕೊಂದು ಕಾಸಿಲ್ಲ,
ತಿರಿದು ತಿನ್ನುವಳಿವಳು, ಈ ಚೆಲುವೆಹುಡುಗಿ.

ವನದಲ್ಲಿ ಮೆರೆಯುತಿಹ ಸುಮವಿದ್ದರೇನು ?
ಅದನು ನೋಡುವರಿಲ್ಲ, ಮುಡಿವರಿಲ್ಲ—
ತುಂಬಿದೀ ಪಟ್ಟಣವು ಇವಳ ಪಾಲಿಗೆ ಕಾಡು :
ಇವಳ ಕೇಳುವರಿಲ್ಲ, ಆರೈವರಿಲ್ಲ.

ಕಾಡುಹಕ್ಕಿಯ ಗಾನವನು ಕೇಳ್ವರಾರು ?
ಆದರೂ ಹಾಡುವುದು ವ್ಯರ್ಥವಾಗಿ—
ಇವಳು ಗಾಯಕಿಯುಲ್ಲ, ಇಂಪಾಗಿ ಹಾಡುವಳು ;
ಇವಳ ಹಾಡನು ಮೆಚ್ಚಿ ಕೇಳ್ವರಿಲ್ಲ.

ಮನೆಮನೆಯ ಬಾಗಿಲಿಗೆ ಹೋಗಿ ಹಾಡುವಳು,
ಒಂದೆ ಹಿಡಿಯಕ್ಕಿಯನು ಬರಿದೆ ಬೇಡುವಳು ;
ಭಿಕ್ಷೆಯನು ಹಾಕದಿರೆ ಮನದಲ್ಲಿ ನೊಂದು
ದೈನ್ಯದಲಿ ದೇವನಿಗೆ ಮೊರೆಯಿಡುವಳು.

ಅವಳ ರೂಪನು ನೋಡಿ ತಲೆಯ ತೂಗಿದೆನು—
ಅವಳುಡುಪ ನೋಡಿದರೆ ತುರುಕರವಳು.
ಬೇರೆಮತದವಳೆಂದು ಭಿಕ್ಷೆಯನು ಕೊಡರು—
ದೂರ ನಡೆ, ತೊಲಗೆಂದು ಗದರಿಸುವರು.

ಎಲ್ಲರೂ ಅಟ್ಟುತಿಹ ಇವಳನ್ನು ನೋಡಿ
ಮರುಗಿದೆನು ಮನದಲ್ಲಿ ಶೋಕದಿಂದ ;
ಯಾರಿಗೂ ಬೇಕಿಲ್ಲದಿವಳ ಗಾನಕ್ಕೆ
ನನ್ನ ಹೃದಯದೊಳಾಗ ಎಡೆಯನಿತ್ತೆ.

ಹೆಣ್ಣಾಗಿ ಹುಟ್ಟಿಹಳು, ಕಷ್ಟಪಡುತಿಹಳು ;
ಜನರೆಂತು ಇವಳನ್ನು ತೊರೆಯುತಿಹರು :
ತಮ್ಮಂತೆ ಜೀವಿಯೆಂದೆಣಿಸದಿಹರು !—
ದೇವನಿಗು ಇವಳಲ್ಲಿ ದಯೆಯಿಲ್ಲವೆ ?

ಎಂ. ವಿ. ಸೀತಾರಾಮಯ್ಯ.

# ಭಿಕ್ಷುಕರು

ಮುಂಜಾವಿಂದ ಸಂಜೆಯುವರೆಗೆ,
ತಿರುಗುತಲಿರುವೆವು ಮನೆಯಿಂ ಮನೆಗೆ,
ಬಿಕ್ಷೆಯ ಬೇಡುತ ಸಾಯುವವರೆಗೆ ;
  ಸಾಂಬ ಶಿವಾ ಹರ ಸಾಂಬ ಶಿವಾ.

ವಿಧಿಮಾತೆಯ ಮಕ್ಕಳುಮರಿ ನಾವು ;
ಶ್ರೀಮಂತರ ಸಿರಿಯಿಂದೆಮಗೇನು ?
ಕಾಣದ ಕುರುಡನಿಗೇತಕೆ ಭಾನು ?
  ಸಾಂಬ ಶಿವಾ ಹರ ಸಾಂಬ ಶಿವಾ.

ದಾನವ ಮಾಡದೆ ಬಿಟ್ಟರೆ ಬಿಡಲಿ ;
ಕುಡಿಯಲು ಹರಿಯುವ ನೀರೊಂದಿರಲಿ ;
ನೆರಳಿನ ಮರವೇ ಮನೆಯಾಗಿರಲಿ ;
  ಸಾಂಬ ಶಿವಾ ಹರ ಸಾಂಬ ಶಿವಾ.

ಅನ್ನವ ಕೊಟ್ಟರು, ಪಾಯಸವಿತ್ತರು,
ರಾಗಿಯ ಅಂಬಲಿ ಗಂಜಿಯ ಕೊಟ್ಟರು,
ಒಂದೆಡೆ ಕೂಡಿಸಿ ಬಾಯೊಳಗಿಡುವೆವು ;
  ಸಾಂಬ ಶಿವಾ ಹರ ಸಾಂಬ ಶಿವಾ.

ಬೇಡುವುದೊಂದೇ ಭಿಕ್ಷುಕಧರ್ಮ ;
ನೀಡುವುದೊಂದೇ ದಾನಿಯ ಕರ್ಮ ;
ಇಂತಿರುವುದು ಭಗವಂತನ ಮರ್ಮ ;
  ಸಾಂಬ ಶಿವಾ ಹರ ಸಾಂಬ ಶಿವಾ.

ಜೀವದ ಭೀತಿ ನಮಗೆಲ್ಲಿರುವುದು ?
ಸ್ವಾತಂತ್ರ್ಯದ ಕೋಲೂರುತ ನಡೆವೆವು ;
ನಾಡಿಂ ನಾಡಿಗೆ ತಿರುಗುತಲಿರುವೆವು ;
ಸಾಂಬ ಶಿವಾ ಹರ ಸಾಂಬ ಶಿವಾ.

ನಮ್ಮಾ ದೈನ್ಯವೆ ನಮ್ಮಯ ಶಕ್ತಿ ;
ಸಂಕಟದಲಿ ಕಾಂಬುದು ಶಿವಭಕ್ತಿ ;
ಬಡತನವೆಂಬುದು ಬಡವರ ಮುಕ್ತಿ ;
ಸಾಂಬ ಶಿವಾ ಹರ ಸಾಂಬ ಶಿವಾ.

ಅರಸನು ಅರಸಾಗಿರುವನು ಇಂದು ;
ಆತನು ಪೋಗುವನೆಲ್ಲಿಗೆ ಮುಂದು ?
ಮರಣವ ಸೇರಲು ಎಲ್ಲರು ಒಂದು !
ಸಾಂಬ ಶಿವಾ ಹರ ಸಾಂಬ ಶಿವಾ.

ದಿನಕರ' ದೇಸಾಯಿ.

# ಮೃತ್ಯುವಿಗೆ ಎಲ್ಲರೂ ಒಂದೇ

ಕುಲಪದವಿಗಳಲಿರುವ ಹೆಮ್ಮೆಹೆಸರೆಲ್ಲ
ಬರಿಯ ಕನಸಿನ ಗಂಟು, ಹುರುಳದರೊಳಿಲ್ಲ.
ಕೊಲುವ ವಿಧಿ ಹಳಚದಾ ಕವಚವೆಲ್ಲುಂಟು ?
ಅರಸರನೆ ಮೃತ್ಯುವುರಿಗೈಯಲೊತ್ತುವನು.
ದಂಡಮಕುಟಗಳೆಲ್ಲ
ಗುಂಡಿಗುರುಳಲೆಬೇಕು,
ಬಡ ಕೊಡಲಿ ಕುಡುಗೋಲು ಗುದ್ದಲಿಗಳೊಡನೆ
ಕೆಡೆದು ಮಣ್ಣಿನೊಳಲ್ಲಿ ಜೊತೆಗೊಳ್ಳಬೇಕು.

ಕತ್ತಿಯಲಿ ಕೆಲರಿಳೆಯ ಕೊಯಿಲುಗೊಳಬಹುದು,
ಕೊಂದ ಕಡೆ ಶಾಸನವನವರು ನೆಡಬಹುದು.
ಬತ್ತಲೇಬೇಕವರ ಹೊಮ್ಮನುರಿ ಕಡೆಗೆ.
ಒಂದು ಹೊರತುಳಿದುವನೆ ಸದೆಬಡಿದರವರು.
ಮೊದಲಲ್ಲೊ, ಕಡೆಯಲ್ಲೊ,
ವಿಧಿಯವರ ನೆಟ್ಟುವನು.
ಜೀವದುಸಿರನು ನೀಗುತವರು ಸೆರೆಯಾಗಿ
ಸಾವಿನೆಡೆಗೊಣಮೋರೆಯಲಿ ನುಸುಳಬೇಕು.

ಬಾಡಿಹುದು ಜಯಮಾಲೆ ನಿಮ್ಮ ಮುಡಿಗಳಲಿ,
ಹೊಗಳಿಕೊಳ್ಳುವಿರೇಕೆ ಇನ್ನು ಶೌರ್ಯವನು ?
ನೋಡಿರೀ ಮೃತ್ಯುವಿನ ಯಜ್ಞಶಾಲೆಯಲಿ
ಅಗೊ, ವಿಜಯಿಪಶುವಿನದು ನೆತ್ತರೊಸರುವುದು.

ಬರಬೇಕು ನಿಮ್ಮ ತಲೆ
ಕೊರೆವ ಗೋರಿಯ ಕೆಳಗೆ.
ಸತ್ಯಾತ್ಮನೊಬ್ಬನವೆ ಕೃತಿಗಳರಳುವುವು
ನಿತ್ಯವೂ ಘಮಘಮಿಸುತವನ ಚಿತಿಯೊಳಗೆ.

ತೀ. ನಂ. ಶ್ರೀಕಂಠಯ್ಯ.

# ಜೀವನದ ತಿರುಳು

ಜೀವನವು ಬರಿನೊರೆಯು ತೊರೆಯಂತೆ ಇರುತಿಹುದು ;
ಬಂಡೆಗಳು ಎರಡು ಮಾತ್ರ—
ಅಲುಗದೆಯೆ, ನಡುಗದೆಯೆ, ಸ್ಥಿರವಾಗಿ ಇರುವುವವು
ಬಂಡೆಗಳು ಎರಡು ಮಾತ್ರ.

ಜೀವನದ ಸಾರವದು ಹರಡಿಹುದು ನೊರೆಯಂತೆ,
ತೊರೆಯ ಮೇಲ್ ತೇಲಿಬಂದು—
ತಿರುಳಿಲ್ಲ, ಹುರುಳಿಲ್ಲ, ಬರಿಯ ನೊರೆ ಹರಡಿಹುದು
ತೊರೆಯ ಮೇಲ್ ತೇಲಿಬಂದು.

ಯಾವುವವು ಬಂಡೆಗಳು ಸ್ಥಿರವಾಗಿ ನಿಂತಿಹವು
ಚಲಿಸದಲೆ ಕಂಭದಂತೆ—
ಘನಮಹಿಮನಾ ದಿವ್ಯದೇಗುಲವ ಪೊತ್ತಿರುವ
ಕಡೆದಿಟ್ಟ ಕಂಭದಂತೆ ?

ಪರರ ಸಂಕಟದೊಳಗೆ ಹೃದಯದಿಂ ಬಸಿದು ಬಹ
ದಯೆಯು ಸೌಭಾಗ್ಯವೊಂದು ;
ತನ್ನ ಸಂಕಟದೊಳಗೆ, ಬೆನ್ನ ತಟ್ಟುತ ಬರುವ
ಧೈರ್ಯದಾ ಭಾಗ್ಯವೊಂದು.

ಈ ಎರಡು ಬಂಡೆಗಳು ಸ್ಥಿರವಾಗಿ ನಿಂತಿಹವು
ಆ ತೊರೆಯ ಮಡುವಿನಲ್ಲಿ—
ಪರಮೇಶನಾಜ್ಞೆಯನು ಶಿರದಲ್ಲಿ ಧರಿಸಿ ತಾ-
ವಾ ತೊರೆಯ ಮಡುವಿನಲ್ಲಿ.

ಆ ಧೈರ್ಯದಯೆಗಳಿಂ ಜೀವನವು ಸವಿಯೂಟ,
ಇಲ್ಲದಿರೆ ನರಕ ತಾನು—
ಇವುಗಳನು ನಮಗಿತ್ತ ಪರಮೇಶನೊಲುಮೆಯನು
ಸ್ಮರಿಸುತ್ತ ನಲಿವೆ ನಾನು.

ಎಚ್. ಎಸ್. ನಾರಾಯಣಶಾಸ್ತ್ರಿ.

# ನೆರೆ

ಮಳೆಗಾಲ ; ಜಿರ್‍ರೆಂದು ಮಳೆ ಬೀಳುತಿತ್ತು,
ಸುತ್ತಲು ಕತ್ತಲು ಕವಿದಿದ್ದಿತು ;
ಗುಡುಗುಡು ಗುಡುಗುಡು ಗುಡುಗಾಡುತಿತ್ತು,
ಥಳಥಳ ಮಿಂಚು ಥಳಿಸಿದ್ದಿತು !
ಭೋರೆಂದು ಬಿರುಗಾಳಿ ಬೀಸುತಲಿತ್ತು,
ಒಲೆಯೊಳು ತನಿಗೆಂಡ ಕಳಕಳಿಸಿತ್ತು.

ಕೆಲಸವ ಪೂರೈಸಿ ಹೊಲದಿಂದ ಬಂದು
ಚಳಿಕಾಯಿಸುತ್ತ ಮಂಜಣ್ಣನು,
ಬೆಂಕಿಯು ಬಳಿಯಲ್ಲಿ ಕೂತಿದ್ದನಾಗ,
ನಾವೆಲ್ಲರವನ ಮುತ್ತಿದ್ದೆವು ;
ಕತೆಗಾರ ಮಂಜಣ್ಣ ಬಲು ಮುದಿಯಾಳು,
ಆದರವನಾ ಬಾಳು ಕಗ್ಗಲ್ಲ ಬಾಳು !

ಅಲ್ಲಿಯೆ ಹತ್ತಿರ ಕುಳಿತಿದ್ದ ಕಿಟ್ಟು,
"ಮಂಜಣ್ಣ, ಒಂದು ಕತೆ ಹೇಳಿ"ಂದನು.
ಅದ ಕೇಳಿ ಬಹುದೂರ ಕುಳಿತಿದ್ದ ಪುಟ್ಟು
ಹತ್ತಿರ ಹತ್ತಿರಕ್ಕೈತಂದನು.
"ಕಟ್ಟಿದ ಕತೆ ಬೇಕೊ ? ನಡೆದದ್ದ ಸಾಕೊ ?
ಯಾವುದು ಎಲೆ ಕಿಟ್ಟು ?" ಮಂಜಣ್ಣನೆಂದ.

"ಕಟ್ಟಿದ ಕತೆಯೇಕೆ, ನಡೆದದ್ದ ಹೇಳು."
ಎಂದೆವು ಒಟ್ಟಿಗೆ ನಾವೆಲ್ಲರೂ.

ಮಂಜಣ್ಣ ಕತೆಹೇಳಲಾರಂಭಮಾಡೆ
ಎಲ್ಲರು ಹತ್ತಿರಕ್ಕೈತಂದರು ;
ಮಂಜಣ್ಣನೆಂದರೆ ನಮಗೆಲ್ಲ ಪ್ರಾಣ,
ಕತೆಹೇಳುವುದರಲ್ಲಿ ಅವನತಿಜಾಣ.

" ಆಗಿನ್ನೂ ನಾ ಹುಡುಗ, ಕಿಟ್ಟುವಷ್ಟಿದ್ದೆ,
ಎಪ್ಪತ್ತುವರ್ಷದಾಚೆಯಲಿ."
" ಆಮೇಲೆ ? ಆಮೇಲೆ ? ಆಮೇಲೆ ? ಹೇಳು ! "
ಎಂದೆವು ಒಟ್ಟಿಗೆ ನಾವೆಲ್ಲರೂ.
" ದೇವರು ಕಳುಹಿದನೆಂದೆಂಬರಣ್ಣ
ಪಾಪಕೆ ಶಿಕ್ಷೆಯೆಂದೆಂಬರಣ್ಣ !

" ದೇವರೊ ದೆವ್ವವೊ ಯಾರಾದರೇನಂತೆ
ಬಲುಘೋರವಾಗಿದ್ದಿತಾ ಮಳೆಯು !
ಹೊಳೆ ಬಂದು, ನೆರೆಯೇರಿ, ಊರೂರೆ ತೇಲಿ
ಮಕ್ಕಳುಮರಿಗಳ ಬಲು ನುಂಗಿತು."
" ಆಮೇಲೆ ? ಆಮೇಲೆ ? ಆಮೇಲೆ ? ಮೇಲೆ ? "
ಎಂದೆವು ಮತ್ತೆ ನಾವೆಲ್ಲರೂ ಕೇಳೆ.

" ನಡುರಾತ್ರಿಯಾಗಿತ್ತು, ಮಲಗಿದ್ದವೆಲ್ಲ,
ಗುಡಿಸಿಲ ಸುತ್ತ ನೀರೇರಿತು !
ಪಡಚಾಗುತಿದ್ದವು ಕಿಟ್ಟು ನಾವೆಲ್ಲ,
ಹಂಡ್ನಾಯಿ ನಮ್ಮ ಕಾಪಾಡಿತು.
ಬಗುಳಿತು, ಬಗುಳಿತು, ಕರೆಯಿತು ನಮ್ಮ,
ಏಳಲೆ ಇಲ್ಲವು ನಮ್ಮಪ್ಪ ಅಮ್ಮ."

'' ಎಳ್ಳಾರದಾಗಿತ್ತೆ ಮಂಜಣ್ಣ, ನೀನು ?
   ಹೋಗಲಿ, ಆಮೇಲೆ ಹೇಳಿ ''ಂದೆವು.
'' ಆಗಿನ್ನು ಸಣ್ಣವನಾಗಿದ್ದ ನಾನು
   ನಿನ್ನಷ್ಟು ಕಿಟ್ಟೂ, ಇರಲಿಲ್ಲವೊ.
ಕೇಳಿರಿ ಹೇಳುವೆ, ಮುಂದಾದ ಕತೆಯ,
ಆಮೇಲೆ ನಮಗಾದ ಬಲುದೊಡ್ಡ ವ್ಯಥೆಯ.

'' ಹಂಡ್ನಾಯಿ ಬಗುಳಿತು ಬಲುಗಟ್ಟಿಯಾಗಿ,
   ಮಲಗಿದ್ದರೆಲ್ಲರು ಮೈಮರೆತು ;
ಕಡೆಗದು ಬಾಗಿಲ ಹಗ್ಗವ ಹರಿದು
   ಒಳನುಗ್ಗಿತೆಮ್ಮ ಕರೆಕರೆದು.
ನೆರೆಯೇರಿ ನೀರುಕ್ಕಿ ಮೊರೆಮೊರೆದು ಬಂತು,
ನೊರೆಯಾಗಿ ಸುಳಿಸುಳಿದು ಭೋರ್ಗರೆದು ಬಂತು!

'' ಎಬ್ಬಿಸಿತಪ್ಪನ ಕೂಗಿಕೊಂಡೆದ್ದ,
   ಅಮ್ಮನ ನನ್ನ ಎಬ್ಬಿಸಿದ ;
ಹಂಡ್ನಾಯಿ ಬಾಲವನಾಡಿಸುತಿತ್ತು,
   ನೆರೆ ಬಂದು ಹೊಸಲಿಗೇರಿದ್ದಿತು !
' ಮಾಡುವುದೀಗೇನು ' ಎಂದ ನಮ್ಮಪ್ಪ !
' ಅಯ್ಯಯ್ಯೊ, ಮಂಜೂ ! ' ಎಂದಳೆಮ್ಮಮ್ಮ !

'' ಹಣತೆಯ ದೀಪವ ಹೊತ್ತಿಸಿ ನೋಡೆ
   ಹೊಳೆನೀರು ಭೋರೆಂದು ಏರುತಿತ್ತು ;
ಅಪ್ಪ ನೋಡಿದ ಮೇಲೆ ಸುತ್ತಲು ತಿರುಗಿ,
   ಮುಖವರಳಿತವನಿಗೆ ಸಂತೋಷದಿ :

ಬಿದಿರಟ್ಟವ ಹಿರಿದು ಜೋಡಿಸಿ ಒಟ್ಟಿ
ತೆಪ್ಪವ ಮಾಡಿದನತಿಬೇಗ ಕಟ್ಟಿ !

" ಏರಿತು ! ಏರಿತು ! ಭೋರ್ಗರೆವ ನೀರು !
ಮುಂಭಾಗದಾ ಗೋಡೆ ದೊಪ್ಪೆಂದಿತು !
ಮನೆಯೊಳಗೆ ನೀರ್‌ನುಗ್ಗಿ ಮೊಳಕಾಲಿಗೇರಿ
ಹಂಡ್ನಾಯಿ ತಲೆ ಮಾತ್ರ ಮೇಲಿದ್ದಿತು !
ದೇವರೇ ಗತಿಯೆಂದು ತೆಪ್ಪವನೇರಿ
ಹೊರಟೆವು ಭೋರೆಂಬ ನೆರೆಯೊಳು ಹೋರಿ !

" ಬಿರುಗಾಳಿ ಬೀಸಿತು, ಥಳಿಸಿತು ಮಿಂಚು,
ಸಿಡಿಲೆರಗಿ ಭೂಮಿ ನಡುಗಿದ್ದಿತು ;
ಹಾರುತ್ತ ಬೀಳುತ್ತ ತೇಲಿತು ತೆಪ್ಪ,
ಜೀವ ಕೈಯಲಿ ಹಿಡಿದು ಕುಳಿತಿದ್ದೆವು ;
ತೆಪ್ಪ ಸೇರಿತು ದಡವ ಪುಣ್ಯವಶದಿಂದ—
ನಮ್ಮಪ್ಪ ' ಅಯ್ಯಯ್ಯೊ, ಹಂಡೆಲ್ಲಿ ? ' ಎಂದ.

" ತೆಪ್ಪವ ಏರುವ ಗಲಿಬಿಲಿಯಲ್ಲಿ
ಹಂಡನ ಮರೆತು ಬಂದಿದ್ದೆವು !
ಅಪ್ಪನ ಕಣ್ಣಲ್ಲಿ ಸುರಿಯಿತು ನೀರು,
ತುಸ: ಯೋಚಿಸುತ್ತ ನಿಂತುಕೊಂಡ.
ಅಪ್ಪನ ಮನದಲ್ಲಿ ಏನೇನು ಬಂತೊ ?
ತೆಪ್ಪ ಹತ್ತುತ ಗುಡಿಗೆ ಹೊರಟನು ಮತ್ತೆ !

" ' ಅಯ್ಯಯ್ಯೊ, ಬೇಡ ' ಎಂದಳೆಮ್ಮಮ್ಮ ;
ಅಪ್ಪನು ಹೊರಟನು ಇಂತೆನ್ನುತ :

‘ ನಮ್ಮನು ಕಾಪಾಡಿತಾ ಹಂಡನಾಯಿ
ಬಾಯಿಲ್ಲದದನು ಕೈ ಬಿಡುವುದೆ ? ’
ಅಪ್ಪ ಹೋದನು ಬೇಗ ; ತೆಪ್ಪ ಮರೆಯಾಯ್ತು,
ಅಪ್ಪನಿಗು ನಮಗದೆ ಕಡೆ ನುಡಿಯಾಯ್ತು !

“ ಅಪ್ಪ ಹೋದವ ಮತ್ತೆ ಹಿಂತಿರುಗಲಿಲ್ಲ,
ಹಂಡ್ನಾಯಿ ಕೂಡ ಬರಲಿಲ್ಲವು ;
ಮೂರು ದಿನದ ಮೇಲೆ ಹೊಳೆಯಾಚೆಯಲ್ಲಿ
ನಾಯಿಯಪ್ಪಿದ ಹೆಣ ಸಿಕ್ಕಿತಂತೆ !
ನಾಯಿಗಾಗಪ್ಪನು ಜೀವವ ಕೊಟ್ಟ,
ಉಪಕಾರಕಾಗಿಯೆ ನಮ್ಮನು ಬಿಟ್ಟ ! ”

ಮುದುಕನ ಮೋರೆಯ ನೋಡುತ್ತ ನಾವು
ಬೆರಗಾಗಿ ಕುಳಿತೆವು ಮಾತಾಡದೆ.
ಎಂದೆಂದಿಗೂ ಅಳದ ಮಂಜಣ್ಣನಂದು
ಕಣ್ಣೀರ ಕರೆದನು ಕತೆಹೇಳುತ.
ಅವನಪ್ಪ ಸತ್ತುದಕಾಗತ್ತುದಲ್ಲ !
ಅವನಪ್ಪನಾ ನೀತಿಗಾಗತ್ತನಲ್ಲಿ !

ಕೆ. ವಿ. ಪುಟ್ಟಪ್ಪ.

# ಝರಿ

ಪರ್ವತಾಗ್ರದಿ ಚಿಮ್ಮಿ ತಗ್ಗಿನಾಳವ ನೆಮ್ಮಿ
ಹರಿವ ಝರಿಗೇಕಿನಿತು ಬರಿಯ ಹೆಮ್ಮೆ ?

ಮಲೆಯ ತುದಿಯಲಿ ಸೆಗೆದು ನೆಲವ ಸಿಗಿಯುತ ಚಿಗಿದು
ಬಂಡೆಗಳ ಬದಿಗೊಗೆದು ಗಿರಿಯೆದೆಯ ಕಿತ್ತೆಸೆದು
ನೊರೆದೆರೆಯ ಹಲ್ಮೊರೆದು ದುಮುಕುತಿಹುದೇಕೆ ?

ಮರಗಿಡಗಳುರುಳಿಸುತ ಪಾತ್ರಗಳನರಳಿಸುತ
ಭೋರೆಂದು ಚೀರಿಡುತ ವಿಲಯವನೆ ತೋರಿಸುತ
ರೋಷದಲಿ ರಭಸದಲಿ ಹೊರಳುತಿಹುದೇಕೆ ?

ಕ್ರಮವಾಗಿ ನಯವಾಗಿ ನಲಿಯುತ್ತ ಬಳುಕುತ್ತ
ಅಂತಿಮದಿ ಭೂಮಿ ಹಿಂಗಿದರಾಯ್ತು ; ಅಲ್ಲದಿರೆ
ಕಡಲ ನೀರೊಳು ಬೆರೆದು ಮರೆಯಾದರಾಯ್ತು.

ಈ ಪರಿಯ ಬದುಕಿನಲಿ ಹೆಮ್ಮೆಯೇಕೆಲೆ ಝರಿಯೆ ?
ಅವ್ಯಕ್ತವಾವುದನು ಸದೆಬಡಿಯಲಾಶಿಸುವೆ ?
ಮರ್ಮವಾವುದನೊರೆದು ಸರಿಯುತಿಹೆ ನೀನು ?

ಜಿ. ಪಿ. ರಾಜರತ್ನಂ.

# ಮಾಗಿ ಬರುತಿದೆ

ನೋಡು, ನೋಡು ! ಕುಳಿರ ಬೀಡು ಮಾಗಿ ಬರುತಿದೆ !
ಹಲ್ಲ ಕಡಿದು ಮುಷ್ಟಿ ಹಿಡಿದು ಸೆಡೆತು ಬರುತಿದೆ !
ಐಕಿಲದರ ತಲೆಯ ತಿರುಳು,
ಕೊರೆಯುವ ಚಳಿಯುಡರ ಕರುಳು,
ಬೆರೆತ ಮುಗಿಲೆ ನರೆತ ಕುರುಳು,
ಮಾಗಿ ಬರುತಿದೆ !
ನೋಡು, ನೋಡು ! ಕುಳಿರ ಬೀಡು ಸಾಗಿ ಬರುತಿದೆ !

ಚಳಿಯು ಕಡಲೊಳದ್ದಿದೊಡಲೊಳದೋ ಬರುತಿದೆ !
ಸುಗ್ಗಿವಸಿರದಾವಿಯುಸಿರದಾಗಿ ಬರುತಿದೆ !
ಕುಳಿರ ಕೈಯೊಳಿದೆಯ ಮುಷ್ಟಿ,
ಗಾನನದಿಯ ಗಡ್ಡೆಗಟ್ಟಿ,
ಕೋಗಿಲೆಗಳ ಕೊರಲ ಕಟ್ಟಿ,
ಮಾಗಿ ಬರುತಿದೆ !
ಜಗವು ಕಂಪಿಸಂತೆ ತಂಪಿನಿಂದ ಬರುತಿದೆ !

ಮೈಯ ಮೇಲೆ ಹನಿಯು ಬೀಳೆ ಕೋತಿ ಮರದಲಿ
ಹಲ್ಲ ಕಿರಿದು, ಬೆಚ್ಚಿ ಸರಿದು, ಶಪಿಸಲುರದಲಿ,
ಮಂಜಿನುಡೆಯ ಹೊದೆದುಕೊಂಡು,
ಬಿಳಿದು ತಿಂಗಳುಣಿಸನುಂಡು,
ಚೆದರುತಿರಲು ಮುಗಿಲ ಹಿಂಡು,
ಬಾನ ಬನದಲಿ,
ಬಹುದು ಮಾಗಿ ಕುರುಬನಾಗಿ ಮುದಿಯತನದಲಿ !

ಹಸುರ ಮೇಲೆ ಬಿಸಿಲ ಲೀಲೆ ತಳತಳಿಸುತಿರೆ,
ಹೊಳೆವ ಕುಳಿರ್‌ಪನಿಯು ತಳಿರ್ ನಳನಳಿಸುತಿರೆ,
ಮೆದ್ದು ಮುಗಿಯೆ ಮುರದ ಮಡ್ಡಿ,
ಮುದ್ದು ಬಿಸಿಲಿಗೊಡಲನೊಡ್ಡಿ,
ದೂರ ಜಾರುತಿರಲು ದೊಡ್ಡಿ,
ರಯ್ಯರಯ್ಯನೆ,
ಚಿಣ್ಣ ಕರುಗಳೊಡನೆ ತುರುಗಳಲೆವುವೊಯ್ಯನೆ !

ಸುಗ್ಗಿಗೇನು ಕಡಿಮೆಯೇನು ನಮ್ಮ ಮಾಗಿಯು ?
ಚಳಿಯನೊಂದನುಳಿದು ಬಂದರದುವೆ ಸುಗ್ಗಿಯು !
ಸುಗ್ಗಿ ಮಗುವು ; ಮಾಗಿ ತಂದೆ !
ಮಾಗಿ ಬಂದರೇನು ಮುಂದೆ ?
ಸುಗ್ಗಿ ಬಸಿರನೊಡೆದು ಹಿಂದೆ
ಬಂದೆ ಬರುವುದು !
ಸೊಗವ ಜಗಕೆ, ನಗೆಯ ಮೊಗಕೆ, ತಂದೆ ತರುವುದು !

ಮುದಿಯ ಚಳಿಯ ಮಾಗಿಯಳಿಯಲೊಡನೆ ನವಮಧು
ಬರಲು, ಗಾಡಿಯಿಂದ ಮೂಡಿ ತಿರೆಯು ನಲಿವುದು !
ಸುಗ್ಗಿ ಬಸಿರನೊಡೆದು ಮೂಡೆ,
ಮಾಗಿವಾಯು ಕುಳಿರ ದಾಡೆ
ಬುಡದ ಬಲವು ಸಡಿಲಿ ಕೂಡೆ
ಬಿದ್ದು ಸೀಳ್ವುದು !
ನಮ್ಮ ಲೋಕಕೊಲಿದು ನಾಕವಡ್ಡಬೀಳ್ವುದು !

ನೋಡು, ನೋಡು ! ಕುಳಿರ ಬೀಡು ಮಾಗಿ ಬರುತಿದೆ !
ನಡುಕ ಹಿಡಿದು ಹಲ್ಲು ಕಡಿದು ಸೆಡೆತು ಬರುತಿದೆ !
ತಣ್ಣೆತುಸಿರನೂದಿಸುತ್ತ,
ಹಣ್ಣೆಲೆಗಳನುದುರಿಸುತ್ತ,
ದೊಣ್ಣೆಯೂರಿ '' ಹು ! ಹು ! '' ಎನುತ್ತ
ಬಾಗಿ ಬರುತಿದೆ !
ನೋಡು, ನೋಡು ! ಕುಳಿರ ಬೀಡು ಮಾಗಿ ಬರುತಿದೆ !

ಕೆ. ವಿ. ಪುಟ್ಟಪ್ಪ.

# ಹಣ್ಣೆಲೆಗೆ

ಚಿಗುರೆಲೆಯು ಲತೆಯೊಡನೆ ಸರಸವಾಡಿದ ಸೊಬಗ
ನೆನೆನೆನೆದು ನೀನಿಂತು ಕುಗ್ಗಿದೆಯ ? ಪೇಳು.

ಎಳಹಸುರ ಯೌವನದ ನವಸುಧೆಯ ಸವಿಯೂಂಟಿ
ಮೆರೆದುದನು ನೆನೆದಿಂತು ಮರುಗಿದೆಯ ? ಪೇಳು.

ಎಳೆತನದ ಮೊದಲಿನಲಿ ಕೆಳೆಯರಿರ್ವರ ಜರೆದು
ನುಡಿದುದನು ನೆನೆದಿಂತು ಕೊರಗಿದೆಯ ? ಪೇಳು.

ಸುಖದೆಳೆಯ ಸವಿಹಣ್ಣು ಕಾಲದಲಿ ಕಹಿಯೊಂದು
ಕಾಣಿಸಲು ಮೊಗವಿಂದು ಕಂದಿಹುದೆ ? ಪೇಳು.

ಒಂದು ದಿನ ನಗುತಿಪ್ಪೆ, ಇಂದೆನ್ನ ಜೀವರಸ
ಬತ್ತಿದುದು, ಎಂದೆನುತ ಬಾಡಿದೆಯ ? ಪೇಳು.

ಕಾಲರಾಯನ ಕ್ರೂರ ಕಟ್ಟಳೆಗೆ ತಲೆಬಾಗಿ
ತತ್ತರಿಸಿ ನೀನಿಂತು ತಗ್ಗಿದೆಯ ? ಪೇಳು :

ಏಕಿಂತು ಸೊರಗಿರುವೆ, ಹಣ್ಣೆಲೆಯೆ ನೀನು ?
ಹುಟ್ಟು ಯಮನೆಡೆಗೊಯ್ವ ಮೊದಲ ಮೆಟ್ಟಲು, ಕೇಳು,
ಹಣ್ಣೆಲೆಯೆ, ಕೇಳು.

ಎಂ. ಎಲ್. ಲಕ್ಷ್ಮೀನಾರಾಯಣರಾವ್.

# ಬ್ರಾಹ್ಮಣಕುಲ

ಅಂದು ಧರ್ಮಧ್ವಜವನೆತ್ತಿ ತೋರಿದೆ ಜಗಕೆ,
ಧರೆಯ ದೇವತೆಯೆಂಬ ಕೀರ್ತಿಯನು ಪಡೆದೆ.
ಕುಂದಿತೀಚೆಗೆ ನಿನಗೆ ಲೋಕಹಿತದಲಿ ಬಯಕೆ,
ಕಿರಿಯರಸು ತುಳಿಮೆಟ್ಟಿ ಮೆರೆದೆ ಗರ್ವದಲಿ ;
ಮುಂದುವರಿಯಲು ಮರೆದೆ, ನೀತಿಪಥವನು ತೊರೆದೆ,
—ಉಳಿಯಬಹುದೇ ನಿನಗೆ ಮೊದಲ ಗೌರವವು !
ಹಿಂದೆ ಪತಿತರನೆಲ್ಲ ನೂಕಿ ಕೈಬಿಟ್ಟುದಕೆ
ಇಳೆಗೆಲ್ಲ ನೀನಿಂದು ಪತಿತವೆನಿಸಿರುವೆ.
ಹಳೆಯ ಪಾಪದ ಫಲವನಿಂದುಣ್ಣುತಿರುವೆ.
ಆದರಯ್ಯೋ, ನನ್ನ ಬ್ರಾಹ್ಮಣನ ಕುಲವೆ,
ಹೋದ ಗುಣವನು ನೆನೆವೆನಿದಕೆ ಮರುಗುವೆನು :
ಕಳೆದ ವೈಭವವೆಲ್ಲಿ, ದುರ್ಗತಿಯಿದೆಲ್ಲಿ !

ತೀ. ನಂ. ಶ್ರೀಕಂಠಯ್ಯ.

# ಹಂಪೆಯ ಭೀಮ

ಕೋಟೆಹೆಬ್ಬಾಗಿಲಲಿ ಬಿಸುಸುಯ್ವನಿವನಾರು ?
ಬಲ್ಗದೆಯ ಮೈಗಲಿಯು ! ಭೀಮನೇನು ?
ಕಂಬನಿಯ ಕರೆಯುತ್ತ ಮೂಕನಾಗೇಕಿಂತು
ನಿಂತಿರುವೆ ಮಾರುತಿಯೆ ? ಮಾತನಾಡು.
ಬೀರ, ಬೀರರ ಬೀರ, ಕಲ್ಲಾಗಿ ನೀನಿಂತು
ಹಾಳೂರ ಬಾಗಿಲನು ಕಾಯುತಿಹೆಯೇನು ?
ಧರಣಿಪರು, ಮಂತ್ರಿಗಳು, ಸೈನಿಕರು, ಕಬ್ಬಿಗರು,
ಬಿಟ್ಟಳಿದ ಪಾಳ್ನೆಲವ ಕಾಯುತಿಹೆಯೇನು ?
ಸೊನ್ನೆದಿಟ್ಟಯನಟ್ಟಿ ಶೂನ್ಯತರಶೂನ್ಯವನು
ಮನದಿ ಮರುಕವನಾಂತು ನೆನೆವೆಯೇನು ?
ನೀನು ಬಾಗಿಲ ಕಾಯುತಿರ್ದೊಡಂ ಹಂಪೆಯಿದು
ಮುಸಲರಿಂ ಹಸಿಮಸಣವಾದುದೇನು ?
ನಿನ್ನಣ್ಣ ಹನುಮಂತನಿಲ್ಲಿರ್ದೊಡಂ ಬಂದು
ನಿನಗೆ ನೆರವಾಗಿದನು ಪೊರೆಯಲಿಲ್ಲೇನು ?
ರನ್ನಪಂಪರ ಮಹಾಕಾವ್ಯರಸರಂಗದಲಿ
ಭಾರತದ ಕೊಳುಗುಳದಿ ನಿನ್ನ ನೋಡಿಹೆನು,
ಕಂಬನಿಯ ಕರೆವ ಭೀಮನನಲ್ಲಿ ಕಂಡಿಲ್ಲ ;
ಜಯಮತ್ತರುದ್ರಮಾರುತಿಯ ಕಂಡೆ !
ನಮಿಸುವ ಹಿಮಾಲಯವ ಕಂಡು ವಿಸ್ಮಿತನಾದೆ,
ಹಂಪೆಯಲಿ, ಭೀಮ, ನೀನಳುವುದನು ಕಂಡು !

ತಿರುಗುವೀ ಗದೆಯೇಕೆ ನಿಷ್ಪಂದವಾಗಿಹುದು ?
ಮೈಮರೆತು ಗೋಳಿಡುತ ನೀನಾರ ನೆನೆವೆ ?
ಇಲ್ಲಿಗೈತಹ ಯಾತ್ರಿಕರ ಎದೆಯ ಮೂಷೆಯುಲಿ
ಹಾಳಾದ ಐಸಿರಿಯ ಕಿಚ್ಚು ಮರುಕೊಳಿಸು !
ಅಣಕಿಸೆವ್ಮನು, ವೀರ ; ಹೆಂಬೇಡಿಗಳು ನಾವು !
ನಿನ್ನ ಗದೆಯಾಘಾತದಿಂದೆಚ್ಚರುವೆವು !
ಹೇ ವೀರಮೂರ್ತಿಯೇ, ಹಂಪೆಯೀ ಮಸಣದಲಿ
ಭೈರವಾಶ್ರುವ ಚೆಲ್ಲಿ ಮೌನದಲಿ ನಿಲ್ಲು !
ಯಾತ್ರಿಕರ ಹೃದಯದಲಿ ಕೆಚ್ಚೂರಿ, ನೆಚ್ಚೂರಿ,
ಹೆಂಬೇಡಿಗಳನೆಲ್ಲ ನಿನ್ನೆಡೆಗೆ ಗೆಲ್ಲು !

ಕೆ. ವಿ. ಪುಟ್ಟಪ

# ಅಂಚೆಯವನು

ಓಲೆಯ ಹಂಚಲು ಹೊರಡುವೆ ನಾನು,
ತೋರಲು ಆಗಸದಲಿ ಬಿಳಿ ಭಾನು ;
ಮನೆಯಲಿ ನೀವು, ಬಿಸಿಲಲಿ ನಾನು !
    ಕಾಗದ ಬಂತು ಕಾಗದವು.

ಹೆಗಲಲಿ ಹಳದಿಯ ಹಸುಬೆಯ ನೀಡಿ,
ಕಾಲಲಿ ಚರ್ಮದ ಎಕ್ಕಡ ಜೋಡಿ,
ತಲೆಯಲಿ ಖಾಕಿಯ ಪಗಡಿಯ ನೋಡಿ
    ಓಲೆಯ ತಂದೆ ಓಲೆಯನು.

ಒಳಗಿಂದಲಿ ಜನರೆನ್ನನು ಕಂಡು,
ಬೇಗನೆ ಹೊರಅಂಗಳಕೈತಂದು,
‘ ಕಾಗದವಿದೆಯೇ,’ ಎನ್ನುವುದುಂಟು ;
    ಕಾಗದ ಬಂತು ಕಾಗದವು.

ಸೊಗಸಿನ ಸುದ್ದಿಯ ತರುವೆನು ನಿಮಗೆ ;
ವ್ಯಸನದ ವಾರ್ತೆಯ ಕೊಡುವೆನು ತಮಗೆ ,
ಎಲ್ಲಾ ಸುದ್ದಿಗಳೊಂದೇ ನಮಗೆ !
    ಓಲೆಯ ತಂದೆ ಓಲೆಯನು.

ಇದು ಧನಹೀನರ, ಇದು ಹಣವಂತರ,
ಇದು ಗುಣಹೀನರ, ಇದು ಗುಣವಂತರ,
ಕಾಗದವೆನ್ನುತ ಮಾಡೆನು ಅಂತರ !
    ಕಾಗದ ಬಂತು ಕಾಗದವು.



೩

‘ ಗಂಡನು ನಾಳೆಗೆ ಬರುವನು ’ ಎಂದು,
‘ ಅಯ್ಯೋ, ಹೆಂಡತಿ ತೀರಿದಳೆ ’ಂದು,
ಹಿಗ್ಗುವ ತಗ್ಗುವ ಮೂಢರಿಗೆಂದು
ಓಲೆಯು ತಂದೆ ಓಲೆಯನು.

ಓಲೆಯ ಕೊಡುವಧಿಕಾರಿಯು ನಾನು ;
ಆದರು ಅದರಲಿ ಬರೆದುದು ಏನು .
ಎಂಬುದನರಿಯೆನು ! ಬಲು ಸುಖಿ ನಾನು !
ಕಾಗದ ಬಂತು ಕಾಗದವು.

ದಿನಕರ' ದೇಸಾಯಿ.

# ಮುಂಗಾರು

ಪಡುವಲ ಕಡಲಿನ ಮಿಂಚನು ಗುಡುಗನು ನುಂಗಿ ಬಸಿರಿನಲಿ ಮುಡಿ-
ಗೆದರಿ,
ಮುಂಗಾರಸುರಿಯು ರಕ್ಕಸವಜ್ಜೆಗಳಿಕ್ಕುತ ಬಂದಳು ಬಲುಗದರಿ !
ಗುಟುರನು ಹಾಕಿತು ಮುಂಗಾರ್ ಗೂಳಿ !
ಘೀಳಿಟ್ಟೊರಲಿತು ಘನಘಟೆಯಾಳಿ !
ಬುಸುಗುಟ್ಟಿತು, ಬೀಸಿತು ಬಿರುಗಾಳಿ !
ಸುತ್ತಲು ಮುತ್ತಿತು ಕಾರ್ಮೋಡ !
ಹರಿಯುವ ಹಾವಿನ ತೆರದಲಿ ಕತ್ತಲೆ ಮೆಲ್ಲನೆ ನುಂಗಿತು ಮಲೆನಾಡ !

ಹಂಜರಿದುರಿಬಿಸಿಲಂಜುತಲಡಗಿತು, ರವಿಮಂಡಲ ಕಣ್ಮರೆಯಾಯ್ತು !
ಕಾಳಿಯ ಕೇಶದ ತಿಮಿರವು ಮುಸುಗಿತು, ಶಾಂತಿಯು ಗಲಭೆಗೆ ಸೆರೆ-
ಯಾಯ್ತು !
ಕಾಳಿಯ ಕಂಗಳ ಕೆಂಬೆಳಕಂತೆ,
ಕೈಹೊಂಬಳೆಗಳ ಹೊಸ ಹೊಗರಂತೆ,
ಝಳಪಿಪ ಖಡ್ಗದ ದೀಧಿತಿಯಂತೆ,
ಮಿಂಚುಗಳೆಸೆದುವು ಗೊಂಚಲಲಿ !
ಹೊಳೆದುವು, ಅಳಿದುವು, ಸುಳಿಸುಳಿದಲೆದುವು ಮುತ್ತುವ ಮೋಡ-
ಗಳಂಚಿನಲಿ.

ಹಾಡುವ ಹಕ್ಕಿಯು ಹಣ್ಣಿನ ಮರದಿಂದೋಡುತ ಹುಲ್ಲಿನ ಹಕ್ಕೆಯಲಿ
ಚಿಲಿಪಿಲಿದನಿಮಾಡವ್ವನ ಕರೆಯುವ ಮರಿಗಳನಪ್ಪಿತು ತೆಕ್ಕೆಯಲಿ.

ಬೆಚ್ಚನೆ ತೆಕ್ಕೆಯೊಳವುಗಳನಿಟ್ಟು,
ಹಸಿದಿಹ ಮಕ್ಕಳಿಗುಣಿಸನು ಕೊಟ್ಟು,
ಗೂಡಿನ ಬಾಯಲಿ ಮಂಡೆಯನಿಟ್ಟು,
ದಿಟ್ಟಿಯ ನಟ್ಟಿತು ಯೋಗಿಯೊಲು,
ಕೊಂಬೆಯ ತೊಟ್ಟಿಲ ತೂಗುತ ಗಾಳಿಯು ಬುಸುಬುಸುಗುಡುತಿರೆ ಭೋಗಿಯೊಲು !

ಬನದಲಿ ಬಯಲಲಿ ಮೇಯುವ ತುರುಗಳು ಜವದಲಿ ಕೊಟ್ಟಿಗೆ-ಗೋಡಿದುವು ;
ಬಾಲವನೆತ್ತಿದ ಕರುಗಳು "ಅಂಬಾ" ಎನ್ನುತ ತಾಯ್ಗಳ ಕೂಡಿ-ದುವು.
ಗುಡುಗಿನ ಸದ್ದಿಗೆ ಕಾಡುಗಳದುರಿ,
ಅಡವಿಯ ಮಿಗಗಳು ಸಿಡಿಲಿಗೆ ಬೆದರಿ,
ಕಿತ್ತೋಡ್ದೋಡುತ ಹಿಂಡನು ಚೆದರಿ,
ಪೊದೆಗಳ ಗುಹೆಯನು ಸೇರಿದುವು.
ತೊಳಲುವ ಕರ್ಮುಗಿಲಾಲಿಯಕಲ್ಗಳ ಮಿರುಗುವ ಮಳೆಯನು ಕಾರಿ-ದುವು !

ವನಪರಿವೃತಗಿರಿಶಿರದಿಂದೊಯ್ಯನೆ ಮರದಲೆದಳಿರನು ತುಳಿತುಳಿದು
ಚೆಲುವಿನ ಹನಿಗಳು, ಸುರಶಿಶುಮಣಿಗಳು ಬುವಿಗಿಳಿತಂದರು ನಲಿ-ನಲಿದು.
ಬಳಿಸಾರುವ ದೂರದ ಸರ ಕೇಳಿ,
ಗಣನೆಗೆ ಸಿಲುಕದ ಮಳೆಹನಿ ಬೀಳಿ,
ಕಬ್ಬಿಗನೆದೆಯಲಿ ಮುದವೊಳಿತೇಳಿ,

ನೆನೆವುದು ಸೊಗದಲಿ ಬಗೆಗಣ್ಣು !
ಧಾರೆಯು ದಾರದಿ ನೆಯ್ದಿಹ ತೆಳ್ಳನೆ ಜವನಿಕೆಯುಡುವಳು ತಿರೆವೆಣ್ಣು !

ಮುಗಿಲಿನ ಮುತ್ತುಗಳಾಲಿಯ ಕಲ್ಲುಗಳುದುರಲು ಹೂಮಳೆಯಂದದಲಿ
ಹುಡುಗರು ಹುಡುಗಿಯರಾಯ್ದಾಯ್ದವುಗಳ ಕುಣಿದು ತಿಂದರಾನಂ-
ದದಲಿ !
ಸಗ್ಗದ ಕಂಬನಿ ತಿರೆಯನು ತೊಯ್ಯೆ,
ಬೆಂದಿಹದುರಿಯನು ಪರ ಬಂದೊಯ್ಯೆ,
ಲೋಕಕೆ ನಾಕವು ಬಿಜಯಂಗಯ್ಯೆ
ಕಿಸಲಯಸುಮಸೋಪಾನದಲಿ,
ಕವಿಹೃದಯದಿ ಮೋಹನಸುರಗಾನದ ಮಳೆಗರೆವುದು ಸುಮ್ಮಾನದಲಿ !

ಕೆ. ವಿ. ಪುಟ್ಟಪ್ಪ.

# ಹೇಮಾವತಿ—ಹೇಮಗಿರಿ

೧

ಹೇಮವಾಹಿನಿ ತಾನು ಹರಿವೆಡೆಗಳಲ್ಲೆಲ್ಲ
ನಗಿಸಿ ತೋಪುಗಳನ್ನು ನುಡಿಸುತಿಹಳು.
ನಿರುತ ವರ್ಧಿಪ ತನ್ನ ಮಂಜುಳಸ್ವನದಿಂದ
ಖಗಗಳಿಗೆ ರಾಗವನು ಕಲಿಸುತಿಹಳು.
ಹರಳುಗಲ್ಲಿನ ಮೇಲೆ ಗೆಜ್ಜೆಗಳು ಝಣರೆನಲು
ಬಿಳಿನೊರೆಯು ನಗೆಸೂಸಿ ನಡೆಯುತಿಹಳು.
ಮೆಲ್ಲಮೆಲ್ಲನೆ ಸರಿದು ಮೆಲ್ದನಿಯು ಮಾತಿನಿಂ-
ದೆಲ್ಲರನು ಬೆರಗಿನಲಿ ನಿಲ್ಲಿಸುವಳು.

ಕಿರುಬಿದಿರು ಗಾಳಿಯಲಿ ಕೊಳಲೂದೆ ರಾಗದಿಂ
ಹೇಮಗಿರಿ ತಲೆಯನ್ನು ತೂಗದಿಹನು.
ಬಣ್ಣಬಣ್ಣದ ಮುಗಿಲು ಗಗನದಲಿ ಸುತ್ತುತಿರೆ
ತನ್ನೆಡೆಗೆ ಬಾರೆಂದು ಕರೆಯದಿಹನು.
ಸಂಜೆಗೆಂಪಿನ ಸಿರಿಯು ಬಣ್ಣದುಡಿಗೆಯ ತೊಡಿಸೆ
ತನ್ನಂದವನೆ ನೋಡಿ ನಲಿಯದಿಹನು.
ಹೆಮ್ಮರವನಲುಗಿಸುತ ಗಾಳಿ ಜೋಗುಳಹಾಡೆ
ಮತ್ತೇರಿ ನಿದ್ದೆಯಲಿ ಮುಳುಗದಿಹನು.

೨

ಹಸುರುಬಯಲಿನ ರಾಣಿ ಬಿರುಗಾಳಿಗಂಜುತ್ತ
ತರತರನೆ ತೆರೆಗಳಲಿ ನಡುಗುತಿಹಳು.

ಚೇಣಿಹುಲ್ಲಿನ ತನ್ನ ಮುಂಗುರುಳು ಕೆದರಿರಲು
ಭಯಚಕಿತೆ ಭೀತಿಯಲಿ ಬೆದರುತಿಹಳು.
ಮುಂದುಗಾಣದೆ ದಡದಿ ಸಂದಿಗೊಂದಿಯ ಹುಡುಕಿ
ಮರೆಯಾಗಲತಿಚಕಿತೆ ಬಯಸುತಿಹಳು.
ಯಾರೆನಗೆ ಶರಣೆಂದು ಕಾತರೇಕ್ಷಣೆ ನೋಡಿ
ಹೇಮಗಿರಿಯನೆ ಕಡೆಗೆ ನಿಟ್ಟಿಸುವಳು.

ಭೀತಿಯಲಿ ಬಗೆ ಬೆದರೆ ಕೆದರಿರುವ ಬನಗಳನು
ಸ್ಥೈರ್ಯದಲಿ ಸಂತವಿಸಿ ನಿಂತಿರುವನು.
ಬಿರುಗಾಳಿ ಹಿಮ್ಮೆಟ್ಟಿ ದೆಸೆದೆಸೆಗೆ ಜಾರುತಿರೆ
ತನ್ನೊಂದು ಬಲುಮೆಯಲಿ ಹಿಗ್ಗದಿಹನು.
ಬನದೇವಿ ಮನ್ನಣೆಯೊಳಿವನಡಿಗೆ ಹೂಮಳೆಯ
ಚೆಲ್ಲುತಿರೆ ಹಿರಿತನದ ಬಿಂಕಪಡನು.
ಹೇಮವಾಹಿನಿ ಮಗುಳೆ ಮುದವೇರಿದಾಲಿಯಲಿ
ಭಯ ಮಿನುಗೆ ನೋಡುತಿರೆ ಸುಮ್ಮಾನಿಸಿಹನು.

೨

ಸಾರಸಂಗಳ ದನಿಯು ಕಾಲ್ಸರದ ನುಣ್ಚರದ
ಮೆಲ್ನಡೆಯು ಬೆಡಗಿಂದ ಸಾರುತಿಹಳು.
ಹೂವುಗಳ ಚೆಲ್ಲುತ್ತ ದಡದ ಮರಗಳು ಬೀಸೆ
ಗಂಭೀರಗಾಮಿನಿಯು ನಡೆಯುತಿಹಳು.
ಬಿಳಿಮರಳ ಬೆಳ್ಪಡೆಯನೋಸರಿಸುತಲ್ಲಲ್ಲಿ
ವಿಭ್ರಮವ ತೋರುತ್ತ ಗಮಿಸುತಿಹಳು.

ಬೆಳ್ದಿಂಗಳ್ಕೈತರಲು ಹೆಚ್ಚಿರುವ ಹರುಷದಿಂ
ಮೀನಾಕ್ಷಿ ಮೋಹದಲಿ ನೋಡುತಿಹಳು.

ನಗೆಗಣ್ಣ ನೋಟದಲಿ ಚೈತ್ರವಧು ಮಿಂಚುಗಳ
ಸುಳಿಸುತಿರೆ ಮೋಹದಲಿ ಕರಗದಿಹನು.
ತಿಳಿನೀರ ಕನ್ನಡಿಯನುಷೆಯು ಹರುಷದಿ ತೋರೆ
ಮಿಗಿಲಾದ ಸೊಬಗಿನಲಿ ಮೆರೆಯದಿಹನು.
ಹೊಳೆತೆರೆಗಳರೆದಿರುವ ನೊರೆಯು ಚಂದನವನ್ನು
ಶಶಿಯು ಲೇಪಿಸೆ ಬರಲು ಬಾಗದಿಹನು.
ಒಲಿಸಲಾರದೆ ಬನವು ಮಾಗಿಯಲಿ ಹಣ್ಣೆಲೆಯು
ಕಣ್ಣೀರ ಸುರಿಸುತಿರೆ ಸಂತವಿಸನು.

೪

ಕರಿಮುಗಿಲು ಕೂಡುತಿರೆ ಗಗನ ಕೋಪವ ತೋರೆ
ತೆರೆಹುಬ್ಬ ಗಂಟಿಕ್ಕಿ ಮೊರೆಯುತಿಹಳು.
ಕುಡಿಮಿಂಚು ಥಳಿಲೆಂದು ಮುಗಿಲುಗಳ ಸೀಳುತಿರೆ
ತೆರೆಗಳಲಿ ಥಳಥಳಿಸಿ ಚಿಮ್ಮುತಿಹಳು.
ಫಳಫಳನೆ ಮಳೆ ಸುರಿಯೆ ದಿಕ್ಕುಗಳು ಕಳವಳಿಸೆ
ಬಂಡೆಗಳನಪ್ಪಳಿಸಿ ಬೊಬ್ಬಿರಿವಳು.
ಶಾಂತನಾದರು ಗಗನ, ಚಂಡಕೋಪವ ಬಿಡದೆ
ಕನಲುತ್ತ ಕೆನ್ನೀರ ಕಾರುತಿಹಳು.

ಮುಗಿಲ ಜಡೆಯನು ಕೆದರಿ ಕನಲಿ ಮಾರುತನೇಳೆ
ಜಗವೆಲ್ಲ ಘೋ ಎನಲು ಮಿಡುಕದಿಹನು.

ದಿಗುತಟಗಳೊಡೆಯುತಿರೆ ಬಾಂದಳವು ಬಿರಿಯುತಿರೆ
ಸಿಡಿಲಿನಬ್ಬರದಲ್ಲಿ ನಡುಗದಿಹನು.
ಹಣೆಗಣ್ಣನುರಿಯುಂತೆ ಕಾಳ್ಕಿಚ್ಚು ಹೊರಳುತಿರೆ
ಬಾರೆಂದು ಬಾಂದೊರೆಯು ಬೇಡದಿಹನು.
ಜೀವಿಗಳು ಬಲುನರಳೆ ಬೇವಸದಿ ರವಿಯುರುಳೆ
ಕಾಲಚಕ್ರವು ಹೊರಳೆ ಕಳಲದಿಹನು.

೫

ಎಂದು ನಿನ್ನಯ ಗಾನವಾರಂಭಿಸಿತು ಹೇಳು,
ನೀನಾರಿಗೇನೊರೆವೆ ಹೇಮಾವತಿ ?
ಗಂಭೀರತರಮೌನವಿಂತಿಹುದು ಹೇಮಗಿರಿ,
ನಿನ್ನಾವ ತತ್ವವನು ಸಾರುತಿಹುದು ?
ಸುಮ್ಮನಿರೆ ನನ್ನಿಂತು ನೀವೇಕೆ ಸೆಳೆಯುವಿರಿ,
ಸೊಗಸ ತೋರುತಲೇಕೆ ತೊಳಲಿಸುವಿರಿ ?
ಆವ ಮಾಯದ ಬಂಧವೆನ್ನ ಜನ್ಮವ ನಿಮಗೆ
ಬಿಗಿದಿಹುದೊ, ನಾನದನು ಮರೆತಿರುವೆನೆ ?

ಹರಿಯುಲಿನ್ನಯ ಕೆಳೆಯು ನಿನ್ನೊಡನೆ ಹೇಮಾವತಿ.
ಗಿರಿವರಾ, ನಿನ್ನೊಂದು ನಿಶ್ಚಲತೆಯಿರಲಿ ನನಗೆ.
ಹರಿವ ನಿಲ್ಲುವ ನಿಮ್ಮ ಪರಿಪರಿಯ ಚೆಲ್ವಿನಿರವು
ಬೆರೆಯುತಾವಗಮೆನ್ನ ಜೀವನದೊಳೊಂದಾಗಲಿ.

ಎ. ಕೆ. ಪುಟ್ಟರಾಮು.

# ಹೇಮಾವತಿಯ ತೀರದಲ್ಲಿ

ಹಗಲ ಕಣ್ಣನು ಮಂಕು ಕವಿಯಿತು,
ಮುಗಿಲ ಬಾಣದ ಬಿರುಸು ಹೆಚ್ಚಿತು,
ನೆಗೆದು ನೊರೆಯನು ಕೀಳುತೋಡಿತು
ಮಲೆಯ ನಾಡಿನ ಹೇಮೆಯು.

ಕರೆಯ ಮಂಟಪದೊಳಗೆ ಕುಳಿತು,
ಬೆರಗುಮಾಡುವ ಪ್ರಕೃತಿಯಂದಿನ
ಇರವ ನೋಡುತ ಮೂಕರಾದೆವು,
ನಾನು ರಾಮುವು ಇಬ್ಬರೂ.

ಮುಗಿಲಿನಾರ್ಭಟ, ಗಾಳಿಯುಲುಹು,
ಹಗಲ ಕಂಬನಿಯಂತೆ ಸೋನೆಯು,
ನೆಗೆದು ಮೊರೆಯುವ ಹೇಮೆಯುಬ್ಬರ,
ಏನು ಭೀಕರ ಪ್ರಕೃತಿಯು!

ಬಾನ ನೀಲವನಲೆಯೊಳಿಟ್ಟು,
ತಾನದೊಂದಿಗೆ ಹಾಡಿ ತೂಗಿದ
ಮಾನವತಿ ಮೃದುಗಮನೆ ಹೇಮೆಯೆ
ಕನಲಿ ಮೊರೆವೀ ಹೇಮೆಯು!

ಹಗಲಿನಂದಿನ ರೂಪು ತಂದಿತು
ಬಗೆಗೆ ಸಾವಿನ ಚಿಂತೆಗಳನು,
ನಗೆಯನಣಕಿಸಿ ಸೊಗವ ಜರೆಯುವ,
ಬವಣೆಗೊಳ್ಳುವ, ಭಾವವ.

ಏನು ಸೋಜಿಗ, ಇಂಥ ದಿನದೊಳು,
ಸ್ನಾನಮಾಡಲು ಪುಣ್ಯಕೆಳಸಿ
ಸಾನುರಾಗದಿ ಬಂದ ಬಾಲೆಯು-
ರಸುವ ಹೇಮೆಯು ನುಂಗಲು ?

ಇರಲಿ ರೂಪವು, ಇರಲಿ ಬೆಡಗು,
ಸುರರ ಕನ್ಯೆಯು ಜರೆವ ಕೊರಲು,
ಇರಲಿ ಸ್ವರ್ಗದ ಮೌಗ್ಧ್ಯ—ಕನ್ಯೆಯು
ಹೊಸಲ ಮುನಿಸನು ತಡೆವಳೆ !

—" ಇರುಳೊಳಿಲ್ಲಾ ಹಾಡಿ ದಣಿದು
ಕೊರಲು ಕಟ್ಟಿದೆ, ಮೊಗವು ಸೊರಗಿದೆ,
ಬರಿಯು ಛಲವೇಕಿಂದು ಮಿಾವರೆ,
ಸೋನೆಹಗಲೊಳು, ಹೊಳೆಯೊಳು ? "

ಕೆಳದಿಯರ ಜೊತೆ ಕೂಡಿ ಸರಸದಿ
ಹೊಳೆಯೊಳಲೆಯುತ ನಲಿವ ಕೌತುಕ-
ಕೆಳಸಿ ತುಡಿಯುವ ಬಾಲೆ ಕೇಳ್ವಳೆ
ತಾಯಿ ನುಡಿದಾ ಹಿತವನು ?

" ಬಾರೆ ಕಮಲೆ, ಬಾರೆ ಗೌರಿ,
ಬಾರೆ ಶಾರದೆ, ಪುಣ್ಯದಿನದೊಳು
ಕಾರ ಮುಗಿಲಿನ ಮೊಳಗಿಗಂಜುತ
ಹೊಳೆಗೆ ಹೋಗದೆ ನಿಲ್ವರೆ ? "

ಏನು ಸಡಗರ, ಏನು ನಗೆಯು,
ಏನು ಉಲ್ಲಸವವರಿಗಂದು !

ಹೊನಲೊಳಡಗಿದ ಜವನ ಮೊಗದೊಳು
ನಗೆಯು ಹರಡುವ ಸರಸವು !

ಅವರ ಮೋದಕೆ, ಆದೊಡಯ್ಯೋ,
ಭುವಿಯೊಳಂದೇ ಚರಮದಿನವು !
ಅವರ ಜೀವದ ಹಣತೆ ಕ್ಷಣದೊಳು
ನಂದಿಹೋಯಿತು ಹೊನಲೊಳು.—

ಹೊಳೆಯು ಮಂಟಪದೊಳಗೆ ಕುಳಿತು
ಹಳೆಯ ನೆನಪನು ಮನಕೆ ತಂದೆನು :
ಹಳುವ ತುಂಬಿದ ಗೋಳ ಹೊಳಲನು,
ಹರಿದ ಕಂಬನಿಕಾಲ್ವೆಯು,

ಆರ ಗಾನದ ಲಹರಿ ಹೃದಯಕೆ
ತೂರಿ ತೋರಿದ ಆತ್ಮದರಕೆಯು-
ನಾರ ಪ್ರೇಮವು ಪೂರ್ಣವಾಡಿತೊ,
ಅಂಥ ತಂಗಿಯು ಸಾವನು.

ತಿಳಿವು ಮರಳಿತು, ಮನದ ದುಗುಡವ-
ನಳಿದು ಮರುಕವನೆರೆವ ತೆರದೊಳು
ತಲೆಯ ತಡಹುತ ರಾಮುವಿದ್ದನು—
ನುಡಿದೆನೀಪರಿ ಕೆಳೆಯುಗೆ :

" ಏನು ದಿನವಿದು ಕೆಳೆಯ, ಹೇಮೆಗೆ
ಏನು ಅಬ್ಬರ !—ಇಂಥ ಹಗಲೊಳು
ಹೊನಲೊಳಳಿದಳು ತಂಗಿ ಜಾನಕಿ ;
ತೋರಬಲ್ಲೆಯ ಮಸಣವ ? "

ಎನ್ನ ಮಾತಿಗೆ ರಾಮು ಮುಯ್ಯುತ
'' ಚಿನ್ನ, ನೆರೆಯೊಳು ಕಾಣದೆ ''ಂದನು—
ಎನ್ನ ಕಂಬನಿಕೋಡಿ ಬೆರೆಯಿತು
ಮೊರೆವ ಹೇಮೆಯ ತೆರೆಯೊಳು.

ಸಾವು ಸೋಕುವುದೆಲ್ಲರನು, ನಿಜ—
ಸಾವಿಗಂಜುತ ಗೋಳ ಕರೆವುದು
ಸಾವು ಒಯ್ಯುವ ಜೀವಕಲ್ಲವು,
ಹಿಂದೆ ಉಳಿಸುವ ಅರಕೆಗೆ !

ಪಿ. ಟಿ. ನರಸಿಂಹಾಚಾರ್.

# ದಂತದ ಬಾಚಣಿಗೆ

೧

ಬಂದಿತು ಶಾಲೆಗೆ ಸೇರುವ ಸಮಯವು—
ಅಣ್ಣನು ಹೊರಟಿಹನು.
ಕಂದಿತು ಪ್ರೇಮದ ತಂಗಿಯ ಮುಖವು
ಕಣ್ಣೀರಲಿ ನೆನೆದು.

' ಬಿಡು ನನ್ನಮ್ಮಾ, ಅಳದಿರು, ತಿರುಗಿ
ಬರುವೆನು ರಜದಲ್ಲಿ.
ನುಡಿ, ಮೈಸೂರಿನ ಪೇಟೆಯಲೇನನು
ತರುವುದು ನಿನಗಾಗಿ ? ''

ಬಳಿಕರೆಹರುಷದಲೊರೆದಳು ಮೆಲ್ಲನೆ :
'' ದಂತದ ಬಾಚಣಿಗೆ.''—
'' ತಿಳಿಯಿತು ; ಇಷ್ಟೆಯೆ ! ತಂದೇ ತರುವೆನು,
ಚಿಂತಿಸದಿರು ನೀನು.''

೨

ನಗರದ ಬೆಡಗಿನ ಸಡಗರಕಂಜುತ
ಜಾರಿತು ದಿನದಿನಕೆ,
ಸೊಗಸಿಗೆ ಮೆಚ್ಚಿದ ಹುಡುಗನ ಮನದಿಂ-
ದೂರಿನ ಹಂಬಲಿಕೆ.

ಶೃಂಗಾರದಲಿ, ನಡೆನೋಟದಲಿ,
ಕಳೆಯಿತು ಹಣವೆಷ್ಟೋ.
ತಂಗಿಯು ಬಯಸಿದ ಬಡಬಾಚಣಿಗೆ
ಸುಳಿಯದು ಕನಸಿನೊಳೂ.

ದಿನಗಳು ನಡೆಯುತ ಹತ್ತಿರ ಹತ್ತಿರ
ಸಾರಿತು ಬೇಸಗೆಯು.
ಮನಸಿಲ್ಲದೆಯೇ ಬಂದನು ತರುಣನು
ಊರಿಗೆ ರಜಕೆಂದು.

"ಅಣ್ಣನು ಬಂದಾ!" ಎನ್ನುತ ಬಾಗಿಲ
ಬಳಿ ಕೂಗುವಳಿಲ್ಲ;
ಚಿಣ್ಣನೆ ನೆಗೆಯುತ ಓಡುತ ಬಂದು
ಸೆಳೆದಪ್ಪುವಳಿಲ್ಲ!

ತಂದೆಯು ಬಾಡಿದ ಮುಖವನು ಕಂಡನು
ಹೊಗುತಲೆ ಮನೆಯೊಳಗೆ.
"ಬಂದೆಯ, ಸೌಖ್ಯವೆ?" ಎನದವನೊಯ್ದನು
ಮಗನನು ಕಿರುಮನೆಗೆ.

ಹಾಸಿಗೆಹಿಡಿಯುತ ಮಲಗಿದ ತಂಗಿಯು
ನೆರೆಗೈದಲು, ಆವಳ
ಆಸೆಯು ಹೊಮ್ಮುವ ಕುಗ್ಗಿದ ಕಂಗಳು
ಹೊರಳಿದುವಿವನೆಡೆಗೆ.

ಕಂದಿದ ಮುಖದಲಿ ಥಟ್ಟನೆ ನಸುನಗೆ-
ಯಡರಿತು, ಪ್ರೇಮದಲಿ
" ತಂದೆಯು, ಅಣ್ಣಾ ? " ಎನ್ನುತ ನರಳಿದ
ನುಡಿ ಸೋಕಿತು ಕಿವಿಗೆ.

ಬಿಚ್ಚಿತು ನಗರದ ಬೆಡಗಿನ ಕಟ್ಟು.
ಅಗುದಿಸಿತು ಸುಮತಿ ;
ಎಚ್ಚರಗೊಂಡನು ತರುಣನು ತಂಗಿಯು
ಬೇಗೆಯು ಬೆಳಕಿನಲಿ.

ಕೊರೆಯಿತು ಕಣ್ಣನು ಬಯಕೆಯು ನೋಟವು.
ಮೂಡಿದ ನಸುನಗೆಯು
ಇರಿಯಿತು ಹೃದಯುವನೊಡೆಯಿತು ಕಿವಿಯನು
ಬೇಡಿದ ಮಾತೆರಡು.

ಏನನು ಕೊಡುವನು ? ಕಂಬನಿಯುದುರಿತು ;
ಹೊರಡದು ನುಡಿಯೇನೂ.
ಜಾನಕಿ ಅಣ್ಣನ ಕೊರಗನು ತಾಳದೆ
ತಿರುಗಿದಳತ್ತ ಕಡೆ.

" ಮನ್ನಿಸು ಪಾಪಿಯನೆ "ಂದನು ಕಡೆಗೆ
ಅಡಗಿದ ಕಂಠದಲಿ—
" ನಿನ್ನೀ ಬಯಕೆಯು . . . ಮುಂದಿನ ರಜದಲಿ . . .
ತಡೆವೆಯ ನಾಲ್ಕು ದಿನ ? "

ನವರಾತ್ರಿಯು ಹೊಸ ನೋಟಕೆ ಪುರದಲಿ
ತರುಣನು ನಿಲ್ಲದೆಯೆ,
ಸವಿಸುವೆ ತಂಗಿಗೆ ಸೌಖ್ಯವನೆಂದು
ಬರುತಿರುವನು ಮನೆಗೆ.

ಬಾಗಿಲ ಬಳಿಯಲಿ ಮಿಂಚಿತು ತಂಗಿಯು
ಕಳೆಗೂಡಿದ ಮುಖವು.
ಬೇಗನೆ ಬಂದಳು, ಅಣ್ಣನ ಕೈಹಿಡಿ-
ದೆಳೆದಳು, ನುಡಿಸಿದಳು.

ಅಣ್ಣನ ಮೈಯಲಿ ಪ್ರೇಮದ ವಾಹಿನಿ
ಅಲೆಯೇರುತಲಿಹುದು.
ಕಣ್ಣಾಲಿಗಳೊಳು ಹೊಸ ಬೆಳಕೊಂದು
ನೆಲೆಗೊಳ್ಳುತಲಿಹುದು.

ಥಟ್ಟನೆ ಜೇಬಿಗೆ ಕೈಯನು ನೀಡಿ
ಹೊರಗೇನನೊ ತೆಗೆದು,
ಇಟ್ಟನು ನಚ್ಚಿನ ತಂಗಿಯು ಕೈಯಲಿ,
ಅರಳುವ ಮುಖದೊಡನೆ.

ಜರುಗಿಸಿ ಸುತ್ತಿದ ಕಾಗದವನು, ಸಂ-
ಜನಿಸಿದ ಕುತುಕದಲಿ
ಹರಿಸಿದಳಾಕಡೆ ಕಣ್ಣನು ಜಾನಕಿ :
ಮಿನುಗಿತು ಬಾಚಣಿಗೆ.

ಕೊಳದಲಿ ಕಲ್ಲೆಸೆದರೆನಿಮಿಷದೊಳೇ
ಕಿರುದೆರೆ ತಲೆದೋರಿ
ಅಳಿವಂದದಲಾ ಕೌತುಕಭಾವವು
ಕರಗಿತು ನೋಟದಲಿ.

ಎವೆಯಿಕ್ಕದೆಯೇ ತಂಗಿಯನಣ್ಣನು
ಸಲೆ ದಿಟ್ಟಿಸುತಿಹನು :
ಅವಧಾನನದಲಿ, ಹಿಂದಿನ ಹಂಬಲು
ಫಲಿಸಿದ ಕುರುಹಿಲ್ಲ !

ಇವನಲಿ, ಮೆಚ್ಚನು ಸಲಿಸುವ ಹಂಬಲು
ದಿನದಿನ ಬೆಳೆದಂತೆ,
ಅವಳಲಿ, ಮುನ್ನಿನ ಬಯಕೆಯ ಹಂಬಲು
ದಿನದಿನಕಿಳಿದಿಹುದು.

ಮೆಚ್ಚಿನ ಕಾಣಿಕೆಯೊಳಗಿಡಿದೊಲುಮೆಯು-
ದೇನೆಂದರಿಯುವಳೆ !
ಬಿಚ್ಚದ ಪೊಟ್ಟಣವನು ತಿರುಗಿತ್ತಳು
ಜಾನಕಿ ಅಣ್ಣನಿಗೆ.

'' ಇದು ಇರಲಣ್ಣಾ, ನೀ ಬಳಲಿರುವೆ,
ದಣಿವಾರಲಿ ಮೊದಲು.
ಇದಕೇನವಸರ, ಬಾ ಒಳಗೆ''ನ್ನುತ
ಕಣೆನಾಟದಳಿದೆಗೆ.

ಆಸೆಯು ಪುಸ್ತಕವನು ಕೊಳ್ಳದೆಯೇ
ಮಿಗಿಸಿದ ಹಣದಲ್ಲಿ,
ಈ ಸಲವಾದರು ತಂಗಿಯು ನಲಿಸಲು
ತೆಗೆದಾ ಬಾಚಣಿಗೆ !

ದೇಹದ ದಣಿವಿನ ನೆನಪೆಲ್ಲಿರುವುದು ?
ನುಲಿಯುತಲಿದೆ ಹೃದಯ,
ಮೋಹದ ತಂಗಿಯು ಕನಿಕರವೇ ತ-
ನ್ನೊಲವನು ದಹಿಸುತಿದೆ !

ರೋಗದ ಬಾಲೆಯ ಬಯಕೆಯ ಸಲಿಸದ
ಯಾತನೆ ಅಸದಳವೊ,
ಈಗದನೇ ಸಲಿಸಲು ಅವಳರಿಯುದ
ಯಾತನೆ ಅಸದಳವೊ ?

ತೀ. ನಂ. ಶ್ರೀಕಂಠಯ್ಯ.

# ಹೀಗಾಯಿತು

ಹಿಮಕರನ ಸೋಂಕಿಗೆ ಮಂದಗಾಮಿನಿ ಯಮುನೆ
ಮುಂದುಮುಂದಕೆ ಹರಿಯೆ, ಚಂದಿರನು ಬಾಲೆಯನು
ಕಾಡುವುದು ತರವಲ್ಲವೆಂದರಿತು, ಬಂದಂತೆ
ಹಿಂದಿರುಗಿ ಗಗನದಲಿ ನಿಂದು ನಿಟ್ಟಿಸುತಿಹನು.
ಸಣ್ಣಸಣ್ಣಲೆಯೊಡನೆ ಯಮುನೆಯಲಿ ಸಾಗುತಿಹ
ಒಡೆಯಲಿ ಕುಳಿತಿಹರು ನೆರೆದುಗುವ ಪ್ರೇಮದಲಿ
ತಲ್ಲೀನರಾಗಿರುವ ನವನೀರನೀರೆಯರು.
ಒಡ ನಡಸುವರಿಲ್ಲ—ತೇಲಿ ಹೋಗುತಲಿಹುದು.
ಹಗಲಿನಲಿ ಮುದ್ದಿಡಲು ಮುನಿಸಾಂತ ರಮಣಿಯೀ
ಜೊನ್ನದಲಿ ರಮಣನನುವಿಂದೆ ಮುದ್ದಿಪುದ ತಾ
ಕದ್ದು ನೋಡುವನಂತೆ ಸದ್ದಿಲ್ಲದೈತರುವ-
ನಾ ವಾಯು ವನಸುಮದ ಸೌರಭದೊಳಾಡಿ.

ಸುಖವನೆಳವರೆಯದಲಿ ಕಡಿಯಲೇಬೇಕೆಂಬ
ವಿಧಿಯಾಜ್ಞೆಪಾಲಿಸುವ ಯಮದೂತನೆನುವಂತೆ
ಮುಂದಿರುವುದಲ್ಲೊಂದು ಕನಲಿ ಮೊರೆಯುವ ಸುಳಿಯು !
ಅದನರಿವರೆಲ್ಲಿವರು ಸುಖಮಗ್ನರಾಗಿರಲು !

ಏನದೇನದು ! ಬಾಲೆ ನುಡಿದಾರ್ತದನಿಯಹುದು !
ಕ್ಷಣಕಾಲ ತಿಗುರಿಯಂದದಿ ಒಡೆ ತಿರುಗಿದುದು.

ಪ್ರಣಯದಾವರ್ತದಲಿ ಸಿಲುಕಿಪ್ಪ ಪ್ರೇಮಿಗಳು
ಮೊರೆಯುವಾ ಗರ್ತದಲಿ ಒರಗಿದರು ಜತೆಯಾಗಿ.
ಮರೆಯಾದುದಾ ಒಡೆ ; ನೊರೆಯೆದ್ದುದಾ ತಲದಿ ;
ನಗುತಿಹನು ಹಿಮಕರನು ; ಜಾರುವಳು ಮೃದುಗಮನೆ.

ಜಿ. ಪಿ. ರಾಜರತ್ನಂ.

## ನನ್ನ ವಾಣಿಗೆ

ಏತಕಿಂತು ಖಿನ್ನಳಾದೆ,
  ನನ್ನ ವಾಣಿಯೆ ?
ಗಾನವೆಲ್ಲ ಬರಿಯ ಗೋಳು,
ದೀನರಾಗದಲ್ಲಿ ನುಡಿವೆ.
ಕುಸಿಯಿತೇಕೆ ನಿನ್ನ ಕೊರಳು ?
ಮುಸುಕಿತೇಕೆ ನಿನಗೆ ಕೊರಗು ?
  ನನ್ನ ವಾಣಿಯೆ !

ಸುಖದ ಹೆಸರೆ ತಿಳಿಯದೇನು,
  ನನ್ನ ವಾಣಿಯೆ ?
ನಲಿದು ನಕ್ಕು ಮೆರೆಯಲೊಲ್ಲೆ,
ಗೆಲವುಗೂಡಿ ಹಾಡಲೊಲ್ಲೆ !
ಉಲ್ಲಸದಲಿ ಮುಗಿವ ಕಥೆಯೆ
ಇಲ್ಲವೇನು ಧರಣಿಯೊಳಗೆ ?
  ನನ್ನ ವಾಣಿಯೆ !

ಅಳುವ ಹುಚ್ಚು ಹಿಡಿಯಿತೇಕೆ,
  ನನ್ನ ವಾಣಿಯೆ ?
ಹೃದಯದಳಲು, ನೋವು, ಸಾವು,—
ಇದನೆ ಹುಡುಕಿ ಹಾಡುಗರೆವೆ.

ಕೊರತೆಯುಲ್ಲೆ ನಿನಗೆ ರುಚಿಯೆ ?
ಹರುಷವೇನು ನಿನಗೆ ಹಗೆಯೆ ?
ನನ್ನ ವಾಣಿಯೆ !

ಇನಿಸು ಕಣ್ಣ ನೀರನೊರಸು,
ನನ್ನ ವಾಣಿಯೆ !
ಮುಖದೊಳೊಮ್ಮೆ ನಗೆಯ ತಾಳು,
ಸುಖದ ಹಾಡನೊಮ್ಮೆ ಹೇಳು.
ಬಳಿಕ—ನಿನಗೆ ಕಾದುಕೊಂಡೆ
ಇಳೆಯೊಳಿರುವುದಲ್ಲ ಗೋಳು !
ನನ್ನ ವಾಣಿಯೆ !

ತೀ. ನಂ. ಶ್ರೀಕಂಠಯ್ಯ.

ನಿನ್ನೆಯ ಮೊನ್ನೆಯ ಹುಡುಗರೊ ನಾವು ;
ನಮಗೇತಕೆ ಹೇಳಜ್ಜರ ಸಾವು !
ಜನನವು, ಜೀವವು, ಮರಣಗಳಂತೆ !
ಏತಕೆ ನಮಗಾ ತತ್ತ್ವದ ಕಂತೆ ?
ಬಾಲ್ಯದ ತೋಯುತರಂಗದ ಮೇಲೆ
ತೇಲುತ ನಗುವುದೆ ನಮ್ಮಯ ಲೀಲೆ.
ನಿನ್ನೆಯ ಮೊನ್ನೆಯ ಹುಡುಗರೊ ನಾವು ;
ನಮಗೇತಕೆ ಹೇಳಜ್ಜರ ಸಾವು !

ನಶ್ವರ ! ನಶ್ವರವೆಂದವರಾರೊ ?
ಇಲ್ಲದುದನು ನಿನಗೊರೆದವರಾರೊ ?
ಎಲ್ಲವನುಳಿವುದೆ ಆದರೆ ಮುಕ್ತಿ
ಎಲ್ಲವನಪ್ಪುವುದರೊಳಿಡೆ ಶಕ್ತಿ.
ಶಕ್ತಿಯ ಮೀರುವುದೇನೋ ಮುಕ್ತಿ ?
ಬಿಡು, ಅದು ಕೈಲಾಗದರ ಕುಯುಕ್ತಿ !
ನಿನ್ನೆಯ ಮೊನ್ನೆಯ ಹುಡುಗರೊ ನಾವು ;
ನಮಗೇತಕೆ ಹೇಳಜ್ಜರ ಸಾವು !

ರವಿ ನಶ್ವರವನು ನೆನೆವನೆ ? ಹೇಳು !
ಶಶಿ ಶಾಶ್ವತವನು ನೆನೆವನೆ ? ಹೇಳು !
ಕನಸಿನ ಮುಕ್ತಿಯ ಪಡೆಯುವೆವೆಂದು
ಕೆಲಸವ ಬಿಡುವರೆ ದಿನಮಣಿ ಇಂದು ?

ಏಳಿದ್ದೇಳೋ, ಓ ಸೋಮಾರಿ !
ವಚನಬ್ರಹ್ಮವು ‘ ಮುಕ್ತಿ ’ಗೆ ಮಾರಿ !
ನಿನ್ನೆಯು ಮೊನ್ನೆಯು ಹುಡುಗರೊ ನಾವು ;
ನಮಗೇತಕೆ ಹೇಳಜ್ಜರ ಸಾವು !

**ಕೆ. ವಿ. ಪುಟ್ಟಪ್ಪ.**

## ಗೊಲ್ಲನ ಬಾಳು

‘ ಮುಂದಿನ ಜನ್ಮದಿ ಬೃಂದಾವನದಲಿ
ನಿನ್ನನು ಗೊಲ್ಲನ ಮಾಡುವೆನು.’
ಎಂದೀ ವರವನು ವಿಧಿಯೆನಗಿತ್ತರೆ
ಇಂದೇ ಸಾಯಲು ಬಯಸುವೆನು !

ಬೃಂದಾವನದೊಳು ಗೊಲ್ಲನ ಮಾಡಲು
ಗೋವುಗಳನು ನಾ ಕಾಯುವೆನು ;
ಮುರಳಿಯನೂದುತ ಆಲದ ನೆರಳಲಿ
ಬನಗಳ ಗೀತವ ಹಾಡುವೆನು.

ಪಂಡಿತ ಕವಿಗಳು ವ್ಯಾಕರಣದ ಬಲ್-
ಬಲೆಯಲಿ ಬಿಗಿದಿಹ ಕವಿತೆಗಳ,
ಜನರಿಗೆ ತಿಳಿಯದ ಸಕ್ಕದನುಡಿಯಲಿ
ಸೆರೆಯಾಗಿರುವಾ ಗೀತೆಗಳ—

ಇವುಗಳನೋದಿ, ನನ್ನೀ ಜನ್ಮವು
ಸಂಸ್ಕೃತವಾಗಿದೆ ಹೇ ದೇವ !
ಜೀವವೆ ಇಲ್ಲದ ಸಂಸ್ಕೃತಿಯೇತಕೆ ?
ಬೇಕಾಗಿರುವುದು ನಿಜಜೀವ.

ಗೊಲ್ಲರು ಊದುವ ಕೊಳಲಿನ ದನಿಯಲಿ
ಜೀವವು ನಲಿನಲಿದಾಡುವುದು !
ದನಗಳ ಬಾಯಿಯ ‘ ಅಂಬಾ ಅಂಬಾ’
ಎಂಬಾ ಗೀತೆಯೊಳಲೆಯುವುದು !

ದನಗಳ ಕಾದು, ಹಾಲನು ಕುಡಿದು,
ಕಂಬಳಿಯಲಿ ನಾ ಮಲಗುವೆನು ;
ನೀಲಿಯ ನಭವೇ ಮನೆಯಾಗಿರುವುದು :
ಹಾಡುವ ಹಕ್ಕಿಯ ಕೇಳುವೆನು.

‘ ಮುಂದಿನ ಜನ್ಮದಿ ಬೃಂದಾವನದಲಿ
ನಿನ್ನನು ಗೊಲ್ಲನ ಮಾಡುವೆನು.’
ಎಂದೀ ವರವನು ವಿಧಿಯೆನಗಿತ್ತರೆ
ಇಂದೇ ಸಾಯಲು ಬಯಸುವೆನು !

ದಿನಕರ ದೇಸಾಯಿ.

# ಲಲಿತಾದ್ರಿ

ತಿರೆಯ ಹೋರಾಟದಲಿ
ಬಗೆ ಕದಡಿ ಕಂಗೆಡಲು,
ನೇಹಿಗನೆ, ಬಾ, ಇಲ್ಲಿ
ಶಾಂತಿಯಿಹುದು !
ತಂಬೆಲರ ತೀಟವಿದೆ
ಬಳಲಿಕೆಯ ಪರಿಹರಿಸೆ ;
ಮೋಹಿಸಲು ಕಂಗಳನು
ಪರಮಸೌಂದರ್ಯವಿದೆ ;
ಜೀವವನು ಸಂತವಿಸೆ
ದೇವಸಾನ್ನಿಧ್ಯವಿದೆ !
ಸೋದರನೆ, ಬಾ, ಇಲ್ಲಿ ;
ಧನ್ಯನಾಗುವೆ ಇಲ್ಲಿ ;
ಪುಣ್ಯನಾಗುವೆ ಇಲ್ಲಿ ;
ಪೂರ್ಣನಾಗುವೆ ಇಲ್ಲಿ,
ಬೆಟ್ಟದಲ್ಲಿ.

ಬೆಂಗದಿರ ಮುಳುಗುತಿರೆ
ಬೈಗುಗೆಂಪಳಿಯುತಿರೆ,
ಮುಚ್ಚಂಜೆ ಮುಸುಗುತಿರೆ,
ಕತ್ತಲೆಯು ಕವಿದು ಬರೆ
ಪಯಣಿಗನೆ, ಬಾ, ಇಲ್ಲಿ

ನಿಂತು ನೋಡು !

ಮೂಡಲನು, ಪಡುವಲನು,
ತೆಂಕಲನು, ಬಡಗಲನು,
ಗಗನವನು, ಭೂಮಿಯನು,
ಮನದಣಿಯೆ, ಕಣ್ತಣಿಯೆ,
ಎದೆಯರಳಿ ಮೈಮರೆಯೆ,
ತೂಣಗೊಂಡವನಂತೆ
ನಿಂತು ನೋಡು !

ಕಂಬನಿಗಳಿಳಿಯುತಿರೆ,
ಮೈನವಿರು ನಿಮಿರುತಿರೆ,
ಎದೆಯಲರು ಅರಳುತಿರೆ,
ಮೋಣಂತರಂಗದಲಿ
ಹೊಸ ಬೆಳಕು ಮೂಡಿಬರೆ,
ಬಣ್ಣನೆಗೆ ಬಾರದಿಹ
ಚೆಲುವನವಲೋಕಿಸಲು
ಮಾತು ಮೈದೆಗೆಯುತಿರೆ,
ಬಾಳೆಲ್ಲ ಹಿಗ್ಗಿಬರೆ,
ದೇಹಪಂಜರದಲ್ಲಿ
ಜೀವ ಹೋರಾಡುತಿರೆ,
ಬಾ ಇಲ್ಲಿ, ನೇಹಿಗನೆ,
ಮೌನದಲಿ ಮಮತೆಯಲಿ
ನಿಂತು ನೋಡು !

ಹುಣ್ಣಿಮೆಯ ದಿನದಲ್ಲಿ
ಪೂರ್ವದಿಗ್ದೇಶದಲಿ,
ದೂರ, ಬಹುದೂರದಲಿ
ಮಬ್ಬಿನ ದಿಗಂತದಲಿ,
ದುಂಡಾಗಿ, ಕೆಂಪಾಗಿ,
ಸುಂದರಸುಧಾಕರನು
ಮೂಡಿ ಮೇಲೇಳುತಿರೆ,
ಸುತ್ತಲಿಹ ಬಯಲುಗಳ
ಹಸುರಾದ ಹೊಲಗಳನು
ಅಲ್ಲಲ್ಲಿ ಮೆರೆಯುತಿಹ
ಬಿತ್ತರದ ಜಲಗಳನು
ಕೌಮುದಿಯು ಮುತ್ತುತಿರೆ,
ಚಂದ್ರಿಕೆಯು ಬೆಳಗುತಿರೆ,
ಬೆಳ್ದಿಂಗಳೆಸೆಯುತಿರೆ,
ಮೌನ ಮಿತಿಮೀರುತಿರೆ,
ಧ್ಯಾನ ಬಗೆವುಗುತಲಿರೆ,
ನಿಂತಿಲ್ಲ, ನೇಹಿಗನೆ,
ಚೆಲುವ ನೋಡು !

ತಾರೆಗಳ ದಿಬ್ಬಣವು
ಗಗನದಿಂದೈತಂದು
ಬೆಟ್ಟದುದಿಯಲಿ ತಳುವಿ,
ಸೋಪಾನಗಳನಿಳಿದು
ತಪ್ಪಲಲಿ ಮೇಳವಿಸಿ

ಕವಿದು ಕಿಕ್ಕಿರಿದಂತೆ,
ಬುವಿ ಬೆಸಲೆಯಾದಂತೆ,
ಚುಕ್ಕಿಗಳ ತಿಂತಿಣಿಯು
ತೆಕ್ಕನೆಯೆ ಪೆತ್ತಂತೆ,
ಸಗ್ಗ ನೆಲಕಿಳಿದಂತೆ,
ಬಾನಿಳೆಗೆ ಬಿದ್ದಂತೆ,
ನೂರಾರು ದೀಪಗಳು,
ಮಿಣುಕುತಿಹ ಸೊಡರುಗಳು,
ಸಾಲಾಗಿ, ಡೊಂಕಾಗಿ,
ಗುಡಿಗಟ್ಟಿ ಕೊಂಕಾಗಿ,
ಗೊಂಚಲಲಿ ಗುಂಪಾಗಿ,
ತೆಕ್ಕನೆಯೆ ಹುಟ್ಟಿಬರೆ,
ಪತ್ತನದಿ ಮಿಂಚಿಬರೆ,
ಬೆರಗಾಗಿ, ಮರುಳಾಗಿ,
ಬಾ ನೋಡು, ನಿಂತಿಲ್ಲಿ
ಮೂಕನಾಗಿ !

ತಾರೆಗಳ ತವರೂರು
ಸಿಂಗರದ ಮೈಸೂರು !
ಕನ್ನಡದ ಕುಶಲತೆಗೆ,
ಕನ್ನಡದ ರಸಿಕತೆಗೆ,
ಕನ್ನಡದ ನಿಪುಣತೆಗೆ,
ಕನ್ನಡಿಯು ಮೈಸೂರು !

ಕನ್ನಡಿಗರೆದೆಯುರಿಯೆ,
ಕನ್ನಡಿಗರೊಲವರಿಯೆ,
ಕನ್ನಡಿಗರಿಂಪರಿಯೆ,
ಸೋದರನೆ, ನೇಹಿಗನೆ,
ಲಲಿತ ಲಲಿತಾದ್ರಿಯುಲಿ
ನಿಂತು ನೋಡು !

ಕಬ್ಬಗಳ ಕಟ್ಟುವೊಡೆ
ಕಬ್ಬಿಗನೆ, ಬಾ ಇಲ್ಲಿ ;
ಗಾನವನು ಹಾಡುವೊಡೆ
ಗಾಯಕನೆ, ಬಾ ಇಲ್ಲಿ;
ಬೀಣೆಯನು ಮಿಡಿಯುವೊಡೆ
ಬಾ ಇಲ್ಲಿ ವೈಣಿಕನೆ ;
ಧ್ಯಾನವನು ಮಾಡುವೊಡೆ
ಬಾ ಇಲ್ಲಿ ತಾಪಸನೆ ;
ಬಣ್ಣದಲಿ ಭಾವಗಳ
ಬಣ್ಣಿಪೊಡೆ ಬಾ ಇಲ್ಲಿ
ವರ್ಣಶಿಲ್ಪಿ !
ದೇಗುಲವು ಭಕ್ತರಿಗೆ,
ಉಪವನವು ರಸಿಕರಿಗೆ,
ಲೌಕಿಕರಿಗಿದು ಸಗ್ಗ,
ವೈದಿಕರಿಗಿದು ಮುಕ್ತಿ,
ಲಲಿತಗಿರಿಯು !

ಕೆ. ವಿ. ಪುಟ್ಟಪ್ಪ.

ಮಾಗಿ ಬಂದು, ಗಿರಿಗೆ ಹಗಲು
ಹಿತದ ಬಿಸಿಲ ಹೊದಿಸಿದಂದು,
ಹಸುಳೆಗೂಡಿ ಬೆಟ್ಟತುದಿಯ
ಗುಡಿಗೆ ನಡೆದೆನು.
ಬಾಲ ಕೊಳಕೆ ಕಲ್ಲನೆಸೆದು
ಸುಳಿಯ ರಚಿಸಿ ನಲಿವ ತೆರದಿ,
ಹಗಲ ಮೌನಕೆಸೆಯುತಿತ್ತು
ಹಾಡ ಹಕ್ಕಿಯು.

ಗಿರಿಯ ತುದಿಯ ಗುಡಿಯ ಸೇರಿ
ಹಸುಳೆಗೂಡಿ ನಿಂತೆನಂದು
ಮಂದಿಯೊಬ್ಬರಿಲ್ಲವಲ್ಲಿ
ಮೌನವಾಳಿತು.
ಹೃದಯದಲ್ಲಿ ಭಕ್ತಿ ಮೂಡಿ
ಮನದೊಳುಚ್ಚಭಾವ ಹೂಡೆ,
ಗುಡಿಯನೊಂದು ಬಳಸು ಬಂದು
ಒಳಗೆ ಹೊಕ್ಕೆನು.

ಅಲ್ಲಿ ವೇದಘೋಷವಿಲ್ಲ,
ತಮಿಳುಪದ್ಯವೊರೆವರಿಲ್ಲ,

'ಮಾನ ಸಲಿಸಲಿಲ್ಲ'ವೆಂಬ
ಜಗಳವಿಲ್ಲವು.
ಇರವಿನಳಲನೆಲ್ಲ ಮರೆಸಿ,
ಮನಕದೊಂದು ತಂಪನೀವ
ದಿವ್ಯಶಾಂತಿಯುಂದು ಕಂಡೆ
ಗಿರಿಯ ಗುಡಿಯೊಳು.

ಗರ್ಭಗುಡಿಯ ಹೊಸಿಲ ಮುಂದೆ
ಭಕ್ತಿನಮ್ರನಾಗಿ ನಿಂತೆ ;
ಹಸುಳೆ ನನ್ನ ಸೆರಗ ಜಗ್ಗಿ
ಬೆರಲ ತೋರಿತು—
ಅಲ್ಲಿ ಮಸಕುಬೆಳಕಿನೊಳಗೆ
ಬಾಗಿದೊಂದು ವ್ಯಕ್ತಿ ಕಂಡೆ :
ಹಣ್ಣುಹಣ್ಣುಮುದುಕಿಯಲ್ಲಿ !
ಬೆಟ್ಟತುದಿಯೊಳು !

ಮುದುಕಿಯುಟ್ಟ ಬಟ್ಟೆ ಚಿಂದಿ,
ನರೆತ ಹೆರಳು, ಸುಕ್ಕುಮೋರೆ,
ಮುಪ್ಪು ತನ್ನ ಮುದ್ರೆಯೊತ್ತಿ-
ದಂಗವವಳದು.
ಆದರವಳ ಕಂಗಳೆರಡು
ಜರೆಯುನಣಕಿಸುತ್ತ ಹೊಳೆದು

ಮುಖಕೆ ಕೊಡುತಲಿಪ್ಪುವೊಂದು
ಬಗೆಯ ಠೀವಿಯು.

ಬೆಟ್ಟಹತ್ತಿ ಬಂದಳೆಂತು ?
ಚಿಂದಿಯುಟ್ಟ ತೀರ ಬಡವೆ
ಮಲೆಯ ನಾರಸಿಂಹಗೀವ
ಳಾವ ಕಾಣಿಕೆ ?
'ಎಲ್ಲರೆದೆಯ ಹೊಗುವ ದೇವ
ಹೊನ್ನುಹಣ್ಣೊಳೆಯನೊಲವ.'
ಎನ್ನುವರಿವು ಆಕೆಗಿತ್ತೊ?—
ಎನಗೆ ತಿಳಿಯದು.

ಸೆರಗಿನಿಂದ ನೆಲವ ಗುಡಿಸಿ
ಮಡಿಲೊಳಿಟ್ಟು ಮುಚ್ಚಿ ತಂದ
ರಂಗವಲ್ಲಿಯಿಂದ ಹಸೆಯ
ಮುದುಕಿ ಬರೆದಳು—
ಮೊದಲು ನೂರು ದಳದ ಪದ್ಮ,
ಅದರ ಸುತ್ತ ಬಳ್ಳಿಹೆಣಿಗೆ,
ಬಳ್ಳಿಯೆಲೆಯ ಮೇಲೆ ಪಕ್ಷಿ-
ಯುಗದ ಬೇಟವು.

ಇಂತು ತನ್ನ ಮನಕೆ ಚೆಲುವು
ಹೊಳೆಯುವಂತೆ ರೂಪುಗೊಡುತ

ಹಸೆಯ ಬರೆಯುತ್ತಿರವ ಮರೆತ-

ಳಂದು ಮುದುಕಿಯು.

ಅವಳ ಕಲೆಗೆ ಮುಗ್ಧನಾದೆ.

ಒಂದು ಡೊಂಕುಗೆರೆಯುಸೆಳೆಯ-

ದವಳ ಕೈಯ ಚಳಕವೆನ್ನ

ಬೆರಗುಮಾಡಿತು !

ಹಣ್ಣುಮುದುಕಿ, ತೀರ ಬಡವೆ,

'ಅಯ್ಯೊ' ಎಂಬರಿಲ್ಲವೇನೊ

ಮಲೆಯ ನಾರಸಿಂಹದೇವ-

ನೊಬ್ಬನಲ್ಲದೆ !

ಅವನು ಮೆಚ್ಚಲೆಂದು, ತನ್ನ

ಮುಪ್ಪಿನಳಲ ಮೂಲೆಗೊತ್ತಿ

ಬೆಟ್ಟವೇರಿ ಹಸೆಯ ಬರೆವ

ಭಕ್ತಿ ಎಂಥದು !

ತೆರೆಯ ತೆಗೆಸಿ, ಹಣ್ಣುಕಾಯ

ಪೂಜೆ ಸಲಿಸಿ, ನೋಡರು ಬೆಳಗ-

ಲವನ ಕಂಡೆ—ಹಸುಳೆಯಿತ್ತ

ಕಡೆಯೆ ತಿರುಗದು.

ಮುದುಕಿ ಬರೆವ ಹಸೆಯ ಮೇಲೆ

ಅದರ ಮನವು, ನಟ್ಟ ನೋಟ,

ದೇವಗೊಲಿದು ಕೈಯ ಮುಗಿಯು-
ವರಿವೆ ಇಲ್ಲವು.

'' ಕಿಟ್ಟು, ನೋಡು, ತಲೆಯ ಮೇಲೆ
ಹೊಳೆವ ಹೊನ್ನುರನ್ನದೊಡವೆ,
ದೇವರುಟ್ಟ ಸರಿಗೆ ಪಂಚೆ,
ಕೊರಲ ಪದಕವ ;
ಮನೆಯ ದೇವರೆಷ್ಟು ಚೆಲುವು ! ''
ಹಸುಳೆ ನೋಡದಿತ್ತು ! ಅದಕೆ
ದೇವನಲ್ಲ—ಮುದುಕಿ ಬರೆವ
ಹಸೆಯೆ—ಸೋಜಿಗ !

ಅವರ ನಡತೆ ಹೊಳೆಸಿತೆಂದು
ಮನಕದೊಂದು ಹೊಸದು ನಿಜವ :
ದೇವನಲ್ಲ—ಬರಿಯ ಬೊಂಬೆ !—
ಹಸೆಯೆ ಸೋಜಿಗ !
ಭಕ್ತಿಮೂರ್ತಿ ಮುದುಕಿಯೊಮ್ಮೆ,
ದೇವನೊಮ್ಮೆ ನೋಡುತೆಂದೆ :
ದೇವ ಬೊಂಬೆ, ಪೂಜೆ ಆಟ,
ಭಕ್ತಿ ಸೋಜಿಗ !

ದೇವನಿರವು ದಿಟವೊ, ಸಟೆಯೊ—
' ಹಿರರು ತಿಳಿಯದಿರಿತಗಳನು,

ಹುದುಗಿ ಇರುವ ಪಾಪಗಳನು,
ಗುಟ್ಟನೆಲ್ಲವ,
ಎದೆಯು ಹೊಗುತಲೆಲ್ಲ ತಿಳಿದು
ಸಂತವಿಡುವನೊಬ್ಬನುಂಟು.'
ಎನ್ನುವಚಲಭಕ್ತಿ ದಿಟವು,
ಮತ್ತು ಸೋಜಿಗ !

ಮುದುಕಿ ಇಹವ ಬಿಟ್ಟಳೇನೊ,
ಮಲೆಯ ದೇವ ಮೆಚ್ಚಲೆಂದು
ಇನ್ನು ಹಸೆಯ ಬರೆಯಳೇನೊ
ಗಿರಿಯ ಗುಡಿಯೊಳು.
ಆದರವನನೊಲಿಸುವುದನೆ
ಬಾಳಿನೊಂದೆ ಗುರಿಯ ಮಾಡಿ-
ದವಳ ನೆನಪು ಎಂದು ಮನಕೆ
ತಂಪನೀವುದು.

ಪಿ. ಟಿ. ನರಸಿಂಹಾಚಾರ್.

# ದೀನಗಿಂತ ದೇವ ಬಡವ

ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ಹರಿಯ ಒಲುಮೆಪಡೆದು ಪುಣ್ಯ
ಗಳಿಸುತಿರುವೆಯಾ ?

ಹುಚ್ಚ ನೀನು, ಹಕ್ಕಿಗೋಡು ;
ದೀನಜನರ ಪಾಡ ನೋಡು ;
ಇರಲು ಗುಡಿಲು ಇಲ್ಲವಲ್ಲ !
ಹೊಟ್ಟೆ ತುಂಬ ಅನ್ನವಿಲ್ಲ !
ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ !

ಹರಿಯ ವಿಶ್ವರೂಪವನ್ನು
ಮರೆತುಬಿಟ್ಟೆಯಾ ?
ಜಗಕೆ ಗೋಡೆಹಾಕಿ ಗುಡಿಯ
ಕಟ್ಟಬಲ್ಲೆಯಾ ?
ದೀನಗೊಂದು ಗೂಡು ಸಾಕು ;
ದೇವಗೊಂದು ವಿಶ್ವ ಬೇಕು ;
ಮಣ್ಣ ಹುಲ್ಲ ಸಣ್ಣ ಗೂಡು—
ಬಡವಗದುವೆ ಸಿರಿಯ ಬೀಡು.

ಹರಿಗೆ ಎಂದು ಗುಡಿಯನೊಂದ
ಕಟ್ಟುತಿರುವೆಯಾ ?
ದೀನಗಿಂತ ದೇವ ಬಡವ-
ನೆಂದು ಬಗೆದೆಯಾ ?

ದಿನಕರ ದೇಸಾಯಿ.

# ಪ್ರಶ್ನೆ

ಅದ್ಭುತಕಾರ್ಯವ ಮಾಡುವರು
ಅದ್ಭುತರೂಪನ ನೋಡಿಹರೆ ?
ಸುಂದರಚಿತ್ರವ ಬರೆಯುವರು
ಸುಂದರಮೂರ್ತಿಯ ಕಾಣುವರೆ ?

ಎಲ್ಲವ ಪಡೆಯಲು ಬೇಡುವರು
ಎಲ್ಲರಿಗಂತೆಯೆ ನೀಡುವರೆ ?
ಎಲ್ಲರು ಒಂದೆಂದಾಡುವರು
ಎರಡೊಂದಾಗಿಸಲಳುತಿಹರೆ ?

ಧರ್ಮದ ಪೀಠವನೇರುವರು
ಧರ್ಮಾಧೀಶನ ನೆನೆಯುವರೆ ?
ಗುಡಿಯಲಿ ದೇವನ ನೋಡುವರು
ಎದೆಯಲಿ ಅವನನು ನೋಡುವರೆ ?

ಟಿ. ಕೆ. ಸೀತಾರಾಮ ಜೋಯಿಸ್.

# ನಂಜುಂಡ

ಜಗದ ಜೀವಿಗಳೆಲ್ಲ ನಿತ್ಯಜೀವನಕೆಳಸಿ
ಕಡಲ ಕಡೆದರು ; ಕಡೆದು ಕಡೆದು ಬಳಲಿದರು.
ಕಡೆವಂದು ನಂಜುದಿಸಿ ಜಗವ ನುಂಗಲು ಬಯಸಿ
ಮಿಗುತ ಹರಡಲು ಜೀವಕೋಟಿಯುಂಜಿದುದು
ಅಂಜಿ ಮೊರೆಯಿಡುತಿರಲು, ವಿಶ್ವೇಶ, ನೀನಂದು
ಮರುಕದಲಿ ಸಂಕಟವ ಪರಿಹರಿಸಲೆಳಸಿ,
ಕರೆಕರೆದು ಕೈನೀಡಿ ಕುಡಿಕುಡಿದು ನಂಜು
ನಂಜುಂಡನೆಂಬೊಂದು ಹಿರಿಯ ಬಿರುದಾಂತೆ.

ನಾನೆ ನಂಜಿನ ಗೂಡು, ನನ್ನಲ್ಲಿ ನೀ ಬಂದು
ಸನ್ನಿಧಿಯ ಮಾಡು. ನನ್ನೆದೆಯ ತುಂಬಿ
ನಂಜುಂಡು ಮತ್ತೊನ್ಮೆ ನಂಜುಂಡನಾಗು
ಅಂಜಿರುವೆನಂಜಿರುವೆನೊಲಿದೆನ್ನ ಸಲಹು.

ಎಂ. ಗುಂಡಪ್ಪ.

---

# ಕವಿ–ಕವನಗಳ ಸೂಚಿಕೆ

ಪುಟ